CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ಸಂಪುಟ ೧೩೯ | ಬೆಂಗಳೂರು, ಗುರುವಾರ, ಡಿಸೆಂಬರ್ ೯, ೨೦೦೪ (ಮಾರ್ಗಶಿರ ೧೮, ಶಕ ವರ್ಷ ೧೯೨೬) | ಸಂಚಿಕೆ ೪೯

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-6, ಕಾರ್ಮಿಕ ಭವನ, ಡೈರಿ ಸರ್ಕಲ್ ಹತ್ತಿರ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29**

**ಪ್ರಕರಣ ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ:ಸಿಆರ್-20:2004, ದಿನಾಂಕ: 18ನೇ ನವೆಂಬರ್ 2004**

**ಅರ್ಜಿದಾರರು**

1. ಶ್ರೀ ಮುನಿಸ್ವಾಮಿರೆಡ್ಡಿ @ ಮುನಿಸ್ವಾಮಿ ಬಿನ್ ಲೇಟ್ ಮುನಿಚೌಡಪ್ಪ, 47 ವರ್ಷ
2. ಶ್ರೀಮತಿ ಪುಟ್ಟಮ್ಮ ಕೋಂ ಮುನಿಸ್ವಾಮಿರೆಡ್ಡಿ @ ಮುನಿಸ್ವಾಮಿ, 40 ವರ್ಷ

**ವಾಸ:** ಬಿಕ್ಕನಹಳ್ಳಿ ವಿಲೇಜ್, ಹಂಪೇನಹಳ್ಳಿ ಪೋಸ್ಟ್, ಸರ್ಜಾಪುರ ಹೋಬಳಿ, ಆನೇಕಲ್ ತಾಲ್ಲೂಕು, ಬೆಂಗಳೂರು ನಗರ ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು**

1. ಯುನೈಟೆಡ್ ಇಂಡಿಯಾ ಇನ್ಶೂರೆನ್ಸ್ ಕಂ. ಲಿ., ನಂ.2, 1ನೇ ಮಹಡಿ, ಹೊಸೂರು ಮುಖ್ಯರಸ್ತೆ, ಮಡಿವಾಳ, ಬೆಂಗಳೂರು-68.
2. ಶ್ರೀ ಟಿ. ಪೂಜಪ್ಪ ಬಿನ್ ತಿಮ್ಮಯ್ಯ, ನಂ.85, ಗೋಣಿಗಟ್ಟಪುರ ವಿಲೇಜ್, ಕೂಗೂರು ಪೋಸ್ಟ್, ಸರ್ಜಾಪುರ ಹೋಬಳಿ, ಆನೇಕಲ್ ತಾಲ್ಲೂಕು, ಬೆಂಗಳೂರು ನಗರ ಜಿಲ್ಲೆ.

**ಪ್ರಕಟಣೆ**

ಮೇಲೆ ವಿಳಾಸಿಸಿದ ಅರ್ಜಿದಾರರು ದಿನಾಂಕ 26.10.2004 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಬಿ.ಎಂ. ಬಸವರಾಜು @ ಬಸವರಾಜು ರೆಡ್ಡಿ, ವಯಸ್ಸು ಸುಮಾರು 24 ವರ್ಷ ಆದ ಇವರು ಮೇಲೆ ವಿಳಾಸಿಸಿರುವ 2ನೇ ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ 1 ಮತ್ತು 2ನೇ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ಕಾಯ್ದೆಯನ್ವಯ ಪರಿಹಾರ ಹಾಗೂ ಇತರೆ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ, ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ನಿಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು.

**ಗೋಪಾಲಕೃಷ್ಣ .ಎಂ**

ಪಿ.ಆರ್. 1622 ಕಾರ್ಮಿಕ ಪರಿಹಾರ ಆಯುಕ್ತರು ಹಾಗೂ ಕಾರ್ಮಿಕ ಅಧಿಕಾರಿ, ಉಪವಿಭಾಗ-6, ಬೆಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-6, ಕಾರ್ಮಿಕ ಭವನ, ಡೈರಿ ಸರ್ಕಲ್ ಹತ್ತಿರ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29**

**ಪ್ರಕರಣ ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ:ಸಿಆರ್-2:2004**

**ಅರ್ಜಿದಾರರು**

1. ರೆಡ್ಡೆಮ್ಮ @ ಪಿ. ರೆಡ್ಡೆಮ್ಮ ಕೋಂ ಲೇಟ್ ರಾಮಯ್ಯ @ ಪಿ. ರಾಮಪ್ಪ, 40 ವರ್ಷ

**ವಿರುದ್ಧ**

**ಪ್ರತಿವಾದಿಗಳು**

1. ಸಿ. ರಾಜೇಂದ್ರ ಬಿನ್ ಚಿನ್ನಪ್ಪನ್, 474, 4ನೇ 'ಎ' ಕ್ರಾಸ್, ಗುರುರಾಜ ಲೇಔಟ್, ವಿದ್ಯಾಪೀಠ ಹಿಂದೆ, ಬನಶಂಕರಿ, 3ನೇ ಹಂತ, ಬೆಂಗಳೂರು.

2. ವಸಂತಮ್ಮ ಕೋಂ ಕೆ. ಕೊಂಡಪ್ಪ, 25 ವರ್ಷ
3. ಸಲ್ಲಮ್ಮ ಕೋಂ ಸುಬ್ರಮಣಿ @ ಮಣಿ, 22 ವರ್ಷ
**ವಾಸ 1 & 3:-** ಗದ್ದೂರ್ ವಿಲೇಜ್, ಕುರ್ರ್ಮ ಪೋಸ್ಟ್, ಪಲಮನೇರ್ ಮಂಡಲ್, ಚಿತ್ತೂರು ಡಿಸ್ಟ್ರಿಕ್ಟ್, ಆಂಧ್ರಪ್ರದೇಶ.
**ವಾಸ 2:-** ಚೆಲ್ಲಪೂಜಾರಿ, ಗಂಗಮ್ಮನಗುಡಿ ಹತ್ತಿರ, ಗೊಬ್ಬಿಲ ಕೊತ್ತೂರ್, ವಿಲೇಜ್ & ಪೋಸ್ಟ್, ಪಲಮನೇರ್ ಮಂಡಲ, ಚಿತ್ತೂರು ಡಿಸ್ಟ್ರಿಕ್ಟ್, ಆಂಧ್ರಪ್ರದೇಶ.

2. ಭಾಸ್ಕರ್ ಬಿನ್ ಚೆಂಗಲರಾಯಪ್ಪ, ಪಲಮನೇರ್ ಮಂಡಲ್ ಚಿತ್ತೂರು ಡಿಸ್ಟ್ರಿಕ್ಟ್, ಆಂಧ್ರಪ್ರದೇಶ.
3. ದಾಮೋದರ್ ಬಿನ್ ಮುನಿಸ್ವಾಮಿ, ಚಾಮುಂಡೇಶ್ವರಿ, ಕನ್ಸ್‌ಟ್ರಕ್ಷನ್ಸ್, ಸಿ8/43, ಕಲಹಳ್ಳಿ (ಅಲಸೂರು ಲೇನ್) ಬೆಂಗಳೂರು
4. ಡಿವಿಜನಲ್ ಇಂಜಿನೀಯರ್, o/o ಟೆಲಿಕಮ್ಯುನಿಕೇಷನ್ಸ್, ಬಿಎಸ್ಎನ್ಎಲ್ (ಔಟ್‌ಡೋರ್) 544/47, ಆರ್.ವಿ. ರಸ್ತೆ, ಜಯನಗರ, ಬೆಂಗಳೂರು.
5. ಡೆಪ್ಯುಟಿ ಡೈರೆಕ್ಟರ್, ಲಾಲ್‌ಬಾಗ್, ಬಾಟನಿಕಲ್ ಗಾರ್ಡನ್ ಬೆಂಗಳೂರು.
6. ಡೆಪ್ಯುಟಿ ಡೈರೆಕ್ಟರ್, ಇಂಜೀನಿಯರ್, ಕೆಪಿಟಿಸಿಎಲ್, ಎಸ್ಎಸ್‌ಡಿ-2, 7ನೇ ಕ್ರಾಸ್, ಬೆಂಗಳೂರು-27.

**ಪ್ರಕಟಣೆ**

ಮೇಲೆ ವಿಳಾಸಿಸಿದ ಅರ್ಜಿದಾರರು ದಿನಾಂಕ 12.11.2004 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಶ್ರೀರಾಮಪ್ಪ, ವಯಸ್ಸು ಸುಮಾರು 50 ವರ್ಷ ಆದ ಇವರು ಮೇಲೆ ವಿಳಾಸಿಸಿರುವ 1 ಮತ್ತು 2ನೇ ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ 1 ರಿಂದ 6 ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ಕಾಯ್ದೆಯನ್ವಯ ಪರಿಹಾರ ಹಾಗೂ ಇತರೆ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ, ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ನಿಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು.

**ಗೋಪಾಲಕೃಷ್ಣ .ಎಂ**

ಪಿ.ಆರ್. 1623 ಕಾರ್ಮಿಕ ಪರಿಹಾರ ಆಯುಕ್ತರು ಹಾಗೂ ಕಾರ್ಮಿಕ ಅಧಿಕಾರಿ, ಉಪವಿಭಾಗ-6, ಬೆಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-6, ಕಾರ್ಮಿಕ ಭವನ, ಡೈರಿ ಸರ್ಕಲ್ ಹತ್ತಿರ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29**

**ಪ್ರಕರಣ ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ:ಸಿಆರ್-11:2004, ದಿನಾಂಕ: 18ನೇ ನವೆಂಬರ್ 2004**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1. ಶ್ರೀ ನಜೀರ್ ಅಹ್ಮದ್ @ ನಜೀರ್ ಬಿನ್ ಲೇಟ್ ಅಬ್ದುಲ್ ಗಫಾರ್, 60 ವರ್ಷ
2. ಶ್ರೀಮತಿ ಹಸೀನ ಖಾನುಂ ಕೋಂ @ ನಜೀರ್ ಅಹ್ಮದ್ @ ನಜೀರ್ 55 ವರ್ಷ
**ವಾಸ:** ನಂ. 28/1, ಯಲ್ಲಪ್ಪ ಸ್ಟ್ರೀಟ್, ಕಂಬಿಗಲ್ ರಸ್ತೆ, ಚಿಕ್ಕಮಾವಳ್ಳಿ, ಬೆಂಗಳೂರು-4.

1. ಶ್ರೀ ಮಕ್ಸೂದ್ ಅಹ್ಮದ್, 32/8, ಶೇಷಾದ್ರಿ ರಸ್ತೆ, ನ್ಯೂ ಸುಪ್ರಭಾತ ಟೂರ್ಸ್ ಅಂಡ್ ಟ್ರಾವೆಲ್ಸ್, ಆನಂದರಾವ್ ಸರ್ಕಲ್ ಹತ್ತಿರ, ಬೆಂಗಳೂರು-9
2. ದಿ ಓರಿಯಂಟಲ್ ಇನ್ಸೂರೆನ್ಸ್ ಕಂಪನಿ, ನಂ. 21, ಸರ್ವಮಂಗಲ ಕಾಂಪ್ಲೆಕ್ಸ್, ಹೊಸೂರು ಮುಖ್ಯರಸ್ತೆ, ಆಡುಗೋಡಿ, ಬೆಂಗಳೂರು-30

**ಪ್ರಕಟಣೆ**

ಮೇಲೆ ವಿಳಾಸಿಸಿದ ಅರ್ಜಿದಾರರು ದಿನಾಂಕ 28.4.2004 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಶ್ರೀ ಮಸೂದ್ ಅಹಮದ್ ವಯಸ್ಸು ಸುಮಾರು 25 ವರ್ಷ ಆದ ಇವರು ಮೇಲೆ ವಿಳಾಸಿಸಿರುವ 1ನೇ ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ 1 ಮತ್ತು 2ನೇ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ಕಾಯ್ದೆಯನ್ವಯ ಪರಿಹಾರ ಹಾಗೂ ಇತರೆ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ, ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ನಿಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು.

**ಗೋಪಾಲಕೃಷ್ಣ .ಎಂ**

ಪಿ.ಆರ್. 1624 ಕಾರ್ಮಿಕ ಪರಿಹಾರ ಆಯುಕ್ತರು ಹಾಗೂ ಕಾರ್ಮಿಕ ಅಧಿಕಾರಿ, ಉಪವಿಭಾಗ-6, ಬೆಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-6, ಕಾರ್ಮಿಕ ಭವನ, ಡೈರಿ ಸರ್ಕಲ್ ಹತ್ತಿರ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29**

**ಪ್ರಕರಣ ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ:ಸಿಆರ್-12:2004, ದಿನಾಂಕ: 18ನೇ ನವೆಂಬರ್ 2004**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1. ಶ್ರೀಮತಿ ಫಿರೋಜ್ ಬೇಗಂ ಕೋಂ ಸೈಯದ್ ಸುಬಾನ್‌ಸಾಬ್, ವಯಸ್ಸು ಸುಮಾರು 47 ವರ್ಷ ನಂ.7/3, ಮೋತಿನಗರ್, 1ನೇ ಕ್ರಾಸ್, ಕಲಾಸಿಪಾಳ್ಯ, ಬೆಂಗಳೂರು.

1. ಶ್ರೀ ಎಂ.ಡಿ. ಸಾವ್‌ಕಾರ್ ಬಿನ್ ಎಂ.ಡಿ. ಅಹಮದುಲ್ಲಾ ನಂ.76/44, 7ನೇ ಕ್ರಾಸ್, 3ನೇ ಮುಖ್ಯರಸ್ತೆ, ವಿಲ್ಸನ್ ಗಾರ್ಡನ್, ಬೆಂಗಳೂರು-27.

2. ದಿ ಡಿವಿಜನಲ್ ಮ್ಯಾನೇಜರ್,
ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂಪನಿ ಲಿ;
2ನೇ ಮಹಡಿ, 9/2, ಮಹಾಲಕ್ಷ್ಮೀ ಛೇಂಬರ್ಸ್,
ಎಂ.ಜಿ. ರಸ್ತೆ, ಬೆಂಗಳೂರು-1.

**ಪ್ರಕಟಣೆ**

ಮೇಲೆ ವಿಳಾಸಿಸಿದ ಅರ್ಜಿದಾರರು ದಿನಾಂಕ 2.6.2004 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಸೈಯದ್ ಸಮೀವುಲ್ಲಾ ವಯಸ್ಸು ಸುಮಾರು 25 ವರ್ಷ ಆದ ಇವರು ಮೇಲೆ ವಿಳಾಸಿಸಿರುವ 1ನೇ ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ 1 ಮತ್ತು 2ನೇ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ಕಾಯ್ದೆಯನ್ವಯ ಪರಿಹಾರ ಹಾಗೂ ಇತರೆ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ, ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ನಿಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು.

**ಗೋಪಾಲಕೃಷ್ಣ .ಎಂ**
ಪಿ.ಆರ್. 1625 ಕಾರ್ಮಿಕ ಪರಿಹಾರ ಆಯುಕ್ತರು ಹಾಗೂ ಕಾರ್ಮಿಕ ಅಧಿಕಾರಿ, ಉಪವಿಭಾಗ-6, ಬೆಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-6, ಕಾರ್ಮಿಕ ಭವನ, ಡೈರಿ ಸರ್ಕಲ್ ಹತ್ತಿರ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29**

**ಪ್ರಕರಣ ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ:ಸಿಆರ್-15:2004, ದಿನಾಂಕ: 18ನೇ ನವೆಂಬರ್ 2004**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1. ಶ್ರೀಮತಿ ಷಹನಾಜ್ ಬೇಗಂ ಕೋಂ ಹೆಚ್.ಎ. ರಜಾಕ್, ವಯಸ್ಸು 45 ವರ್ಷ.
2. ಶ್ರೀ ಹೆಚ್.ಎ. ರಜಾಕ್, 65 ವರ್ಷ ನಂ.350, 3ನೇ ಅಡ್ಡರಸ್ತೆ, ಹೊಸಗುರಪ್ಪನ ಪಾಳ್ಯ, ಬನ್ನೇರುಘಟ್ಟ ರಸ್ತೆ, ಅಯ್ಯಪ್ಪ ದೇವಸ್ಥಾನದ ಹತ್ತಿರ, ಬೆಂಗಳೂರು-29.

1. ವ್ಯವಸ್ಥಾಪಕರು, ದಿ ಓರಿಯಂಟಲ್ ಇನ್ಸೂರೆನ್ಸ್ ಕಂ. ಲಿ., ನಂ.3, 1ನೇ ಮಹಡಿ, ಕ್ವೀನಿ ಬಿಲ್ಡಿಂಗ್ಸ್, 1ನೇ ಕ್ರಾಸ್, ಗಾಂಧೀನಗರ, ಬೆಂಗಳೂರು.
2. ಶ್ರೀ ಮೆಹಮದ್ ಇಲಿಯಾಸ್, ಪ್ರೊಪ್ರೈಟರ್ ರೀಗಲ್ ಟ್ರಾವೆಲ್ಸ್, ನಂ. 16/1ಸಿ, ಟಿಪ್ಪು ಸುಲ್ತಾನ, ಪ್ಯಾಲೇಸ್ ರಸ್ತೆ, ಬೆಂಗಳೂರು-2.

**ಪ್ರಕಟಣೆ**

ಮೇಲೆ ವಿಳಾಸಿಸಿದ ಅರ್ಜಿದಾರರು ದಿನಾಂಕ 16.7.2004 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಶ್ರೀ ಸಾಧಿಕ್ ಸೊಹೆಲ್, ವಯಸ್ಸು ಸುಮಾರು 28 ವರ್ಷ ಆದ ಇವರು ಮೇಲೆ ವಿಳಾಸಿಸಿರುವ 2ನೇ ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ 1 ಮತ್ತು 2ನೇ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ಕಾಯ್ದೆಯನ್ವಯ ಪರಿಹಾರ ಹಾಗೂ ಇತರೆ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ, ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ನಿಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು.

**ಗೋಪಾಲಕೃಷ್ಣ .ಎಂ**
ಪಿ.ಆರ್. 1626 ಕಾರ್ಮಿಕ ಪರಿಹಾರ ಆಯುಕ್ತರು ಹಾಗೂ ಕಾರ್ಮಿಕ ಅಧಿಕಾರಿ, ಉಪವಿಭಾಗ-6, ಬೆಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-6, ಕಾರ್ಮಿಕ ಭವನ, ಡೈರಿ ಸರ್ಕಲ್ ಹತ್ತಿರ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29**

**ಪ್ರಕರಣ ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ:ಸಿಆರ್-17:2004, ದಿನಾಂಕ: 18ನೇ ನವೆಂಬರ್ 2004**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1. ಜಾನಕಮ್ಮ ಕೋಂ ಲೇಟ್ ಜಿ. ಕೃಷ್ಣಪ್ಪ 36 ವರ್ಷ ವಯಸ್ಸು
2. ಕೆ. ನರೇಂದ್ರ ಬಿನ್ ಲೇಟ್ ಜಿ. ಕೃಷ್ಣಪ್ಪ 21 ವರ್ಷ ವಯಸ್ಸು
3. ಕೆ. ಲಿಂಗೇಶ್ವರ ಬಿನ್ ಲೇಟ್ ಜಿ. ಕೃಷ್ಣಪ್ಪ 18 ವರ್ಷ ವಯಸ್ಸು ಅತ್ತಿಬೆಲೆ ವಿಲೇಜ್, ಅತ್ತಿಬೆಲೆ ಪೋಸ್ಟ್, ಆನೇಕಲ್ ತಾಲ್ಲೂಕು, ಬೆಂಗಳೂರು ಜಿಲ್ಲೆ.

1. ಕೆ. ರಾಮಚಂದ್ರ ಬಿನ್ ಕೊಂಡಪ್ಪ ಅತ್ತಿಬೆಲೆ, ಆನೇಕಲ್ ತಾ।। ಬೆಂಗಳೂರು ಜಿಲ್ಲೆ.
2. ದಿ ನ್ಯೂ ಇಂಡಿಯಾ ಇನ್ಸೂರೆನ್ಸ್ ಕಂ. ಲಿ., 1ನೇ ಮಹಡಿ, ಕೆಐಎಡಿಎ ಕಾಂಪ್ಲೆಕ್ಸ್, ಹೊಸೂರು ರಸ್ತೆ, ಬೊಮ್ಮಸಂದ್ರ, ಬೆಂಗಳೂರು-99.

**ಪ್ರಕಟಣೆ**

ಮೇಲೆ ವಿಳಾಸಿಸಿದ ಅರ್ಜಿದಾರರು ದಿನಾಂಕ 8.10.2004 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಶ್ರೀ ಜಿ. ಕೃಷ್ಣಪ್ಪ, ವಯಸ್ಸು ಸುಮಾರು 46 ವರ್ಷ ಆದ ಇವರು ಮೇಲೆ ವಿಳಾಸಿಸಿರುವ 1ನೇ ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ

ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ 1 ಮತ್ತು 2ನೇ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ಕಾಯ್ದೆಯನ್ವಯ ಪರಿಹಾರ ಹಾಗೂ ಇತರೆ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ, ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ನಿಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು.

**ಗೋಪಾಲಕೃಷ್ಣ .ಎಂ**

ಪಿ.ಆರ್. 1627 ಕಾರ್ಮಿಕ ಪರಿಹಾರ ಆಯುಕ್ತರು ಹಾಗೂ ಕಾರ್ಮಿಕ ಅಧಿಕಾರಿ, ಉಪವಿಭಾಗ-6, ಬೆಂಗಳೂರು.

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ, ದಾವಣಗೆರೆ ವಿಭಾಗ, ದಾವಣಗೆರೆ**

**ಕಛೇರಿ ಆದೇಶ ಸಂಖ್ಯೆ: 15/2004-05/713, ದಿನಾಂಕ: 28ನೇ ಅಕ್ಟೋಬರ್ 2004**

ಶ್ರೀ ರಂಗಧಾಮಯ್ಯ **ಫಿರ್ಯಾದಿದಾರರು**
ಆರಕ್ಷಕ ಉಪ ನಿರೀಕ್ಷಕರು (ನಿವೃತ್ತಿ) ಕೇರಾಫ್ ಚಾಲಕ ಶ್ರೀಧರ,
ಬುರಕನಕಟ್ಟೆ ಮಧುಗಿರಿ ಟೌನ್, ತುಮಕೂರು ಜಿಲ್ಲೆ.

**(ನ್ಯಾಯವಾದಿ :** ಸಹಾಯಕ ಅಭಿಯೋಗ ನಿರ್ದೇಶಕರು, ದಾವಣಗೆರೆ)

**ಮತ್ತು**

1. ಶ್ರೀ ಸುರೇಶ್‌ಚಂದ್ ನಹಾರ್ ಬಿನ್ ಜಿ. ಜಬ್ಬಾರ್ ಚಂದ್ ನಹಾರ್ ಫೈನಾನ್ಸಿಯರ್ **ಆರೋಪಿ**
ಮನೆ ನಂ.4, 255 ಮೇನ್ ರೋಡ್ ಮೆಟ್ಟುಪಾಳ್ಯಂ ಕೊಯಿಮತ್ತೂರು, ತಮಿಳುನಾಡು
ರಾಜ್ಯ (ಶ್ರೀ ಮುಸ್ತಾಕ್ ಮಹಮದ್ ಮಾಲ್ವ, ವಕೀಲರು, ದಾವಣಗೆರೆ)

**ಪ್ರಸ್ತಾವನೆ:**

1. ದಿನಾಂಕ: 11.1.1999ರಂದು ದಾವಣಗೆರೆ ವಿಭಾಗ, ಹೊನ್ನಾಳಿ ವಲಯದ ಮಾಸಡಿ ಗ್ರಾಮದ ಹತ್ತಿರ ಖಚಿತ ವರ್ತಮಾನ ಬಂದ ಮೇರೆಗೆ ಪಿ.ಎಸ್.ಐ. ಹೊನ್ನಾಳಿಯವರು ಸಿಬ್ಬಂದಿಯೊಂದಿಗೆ ಹೊನ್ನಾಳಿ-ಹರಿಹರ ಚೆಕ್ ಪೋಸ್ಟ್ ಹತ್ತಿರ ಕಾಯುತ್ತಿದ್ದಾಗ ಶಿವಮೊಗ್ಗ ಕಡೆಯಿಂದ ಒಂದು ಕಾರು ಪಾಸಾಗಿ ಹರಿಹರ ಕಡೆ ಹೋಗುವಾಗ ನಿಲ್ಲಿಸಲು ಪ್ರಯತ್ನಪಟ್ಟಾಗ ಕಾರನ್ನು ನಿಲ್ಲಿಸದೇ ಮುಂದೆ ಹೋಗಿ ಮೀಸೆ ಮಾಯಪ್ಪನವರ ಜಮೀನಿನ ಹತ್ತಿರ ಕಾರನ್ನು ನಿಲ್ಲಿಸಿ ಕಾರಿನಲ್ಲಿದ್ದವರು ಓಡಿಹೋದರು. ನಂತರ ಪೊಲೀಸ್ ಸಿಬ್ಬಂದಿಯವರು ಕಾರನ್ನು ಪರಿಶೀಲಿಸಿದಾಗ ಕಾರಿನಲ್ಲಿ ಶ್ರೀಗಂಧದ ತುಂಡುಗಳು ಇದ್ದುದು ಕಂಡು ಬಂದಿತು. ನಂತರ ಪೊಲೀಸ್ ಅಧಿಕಾರಿಗಳು ಪಂಚರ ಸಮಕ್ಷಮದಲ್ಲಿ ಗಂಧದ ತುಂಡುಗಳನ್ನು ಹಾಗೂ ಅದನ್ನು ಸಾಗಿಸಿದ್ದ ಕಾರನ್ನು ಅಮಾನತ್ತುಪಡಿಸಿಕೊಂಡು ಕೇಸನ್ನು ದಾಖಲಿಸಿ ತನಿಖೆಯನ್ನು ಮುಂದುವರೆಸಿದ್ದು ಇರುತ್ತದೆ ಹಾಗೂ ವಾಹನವನ್ನು ಮತ್ತು ಶ್ರೀಗಂಧದ ತುಂಡುಗಳನ್ನು ಮುಂದಿನ ಕ್ರಮಕ್ಕೆ ಅಧಿಕೃತ ಅಧಿಕಾರಿಯ ಮುಂದೆ ಹಾಜರುಪಡಿಸಿದ್ದು ಇರುತ್ತದೆ.

2. ದಿನಾಂಕ:5.3.1999 ರಂದು ಅರ್ಜಿದಾರರ ಪರ ವಕೀಲರು ಸದರಿ ವಾಹನವನ್ನು ಮಧ್ಯಂತರ ಆದೇಶದ ಮೇರೆಗೆ ಬಿಡಬೇಕೆಂದು ಅರ್ಜಿ ಸಲ್ಲಿಸಿದ್ದು, ಸದರಿ ಅರ್ಜಿಯ ಸಂಗಡ ವಾಹನಕ್ಕೆ ಸಂಬಂಧಿಸಿದ ಕಾಗದ ಪತ್ರಗಳ ಜೆರಾಕ್ಸ್ ಪ್ರತಿಯನ್ನು ಹಾಜರುಪಡಿಸಿದ್ದು ಇರುತ್ತದೆ. ತನ್ನ ತಾಯಿ ವಾಹನ ಖರೀದಿಗೋಸ್ಕರ ಹಣಕಾಸಿನ ನೆರವು ಒದಗಿಸಿದ್ದು ನಂತರ ವಾಹನದ ಮಾಲೀಕರು ಹಣವನ್ನು ಕೊಟ್ಟಿರುವುದಿಲ್ಲ. ಆದ್ದರಿಂದ ವಾಹನವನ್ನು ಬಿಡುಗಡೆ ಮಾಡಬೇಕಾಗಿ ನಮ್ಮ ತಾಯಿ ನನಗೆ ಮುಕ್ತಿಯಾರ್ ಪತ್ರವನ್ನು ಕೊಟ್ಟಿರುತ್ತಾರೆ. ಈ ವಾಹನವನ್ನು ಮಾಲೀಕರಿಗೆ ಗೊತ್ತಿಲ್ಲದೆ ಕಳ್ಳ ಸಾಗಾಣಿಕೆ ಮಾಡಲಿಕ್ಕೋಸ್ಕರ ತೆಗೆದುಕೊಂಡು ಹೋಗಿರಬಹುದು ಆ ಬಗ್ಗೆ ನನಗೆ ಮಾಹಿತಿ ಇಲ್ಲ, ಆದುದರಿಂದ ವಾಹನವನ್ನು ನನ್ನ ತಾಬಾಕ್ಕೆ ಮಧ್ಯಂತರ ಆಜ್ಞೆ ಮೂಲಕ ಕೊಡಲು ಕೋರಿರುತ್ತಾರೆ. ಆದರೆ ದಿನಾಂಕ: 5.1.2000 ರಂದು ಸಹಾಯಕ ಅಭಿಯೋಗ ನಿರ್ದೇಶಕರು, ತಮ್ಮ ತಕರಾರನ್ನು ಸವಿಸ್ತಾರವಾಗಿ ಸಲ್ಲಿಸಿ ಅರ್ಜಿದಾರರಿಗೆ ಈ ಹಂತದಲ್ಲಿ ವಾಹನ ಬಿಡುಗಡೆ ಮಾಡಲಿಕ್ಕೆ ಬರುವುದಿಲ್ಲ ಅರ್ಜಿದಾರರು ನಿಜವಾದ ಮಾಲೀಕರು ಆಗಿರುವುದಿಲ್ಲ. ಮುಕ್ತಿಯಾರ್ ಪತ್ರ ಇದ್ದವರು ಮತ್ತೆ ಮುಕ್ತಿಯಾರ್ ಪತ್ರವನ್ನು ಬೇರೆಯವರಿಗೆ ಕೊಡಲಿಕ್ಕೆ ಕಾನೂನಿನಲ್ಲಿ ಅವಕಾಶವಿಲ್ಲ. ಅತ್ಯಂತ ಬೆಲೆ ಬಾಳುವ ಕಾರನ್ನು ಯಾವುದೇ ಮಾಲೀಕ ತನ್ನ ಅನುಮತಿ ಇಲ್ಲದೇ ಬೇರೆಯವರಿಗೆ ಕೊಡಲಾರ. ಮಾಲೀಕರಿಗೆ ಈ ಬಗ್ಗೆ ಮಾಹಿತಿ ಇದ್ದಾಗ್ಯೂ ಸಹ ಅರ್ಜಿಯಲ್ಲಿ ಸುಳ್ಳು ಮಾಹಿತಿ ಸಲ್ಲಿಸಿರುತ್ತಾರೆ ಅಂತ ತಕರಾರು ಹಾಕಿದರು. ಅರ್ಜಿದಾರರ ಪರ ವಕೀಲರು ಹಾಗೂ ಸಹಾಯಕ ಅಭಿಯೋಗ ನಿರ್ದೇಶಕರ ವಾದ, ವಿವಾದ ಕೇಳಲಾಯಿತು ಹಾಗೂ ಅರ್ಜಿದಾರರು ಹಾಜರುಪಡಿಸಿದ ತೀರ್ಪಿನ ನಕಲನ್ನು ಪರಿಶೀಲಿಸಲಾಯಿತು.

3. ಅರ್ಜಿದಾರರು ತನ್ನ ಅರ್ಜಿಯಲ್ಲಿ ಕಾಣಿಸಿದ ವಿಷಯಗಳು ನಂಬಲಿಕ್ಕೆ ಯೋಗ್ಯವಲ್ಲದ್ದಾಗಿರುವುದರಿಂದ ಹಾಗೂ ತೀರ್ಪಿನ ನಕಲು ಪರಿಶೀಲಿಸಲಾಗಿ ಅದು ಈ ಕೇಸಿಗೆ ಅನ್ವಯವಾಗುವುದಿಲ್ಲ ಸಹಾಯಕ ಅಭಿಯೋಗ ನಿರ್ದೇಶಕರು ತಕರಾರು ಈ ಹಂತದಲ್ಲಿ ಮಾನ್ಯತೆ ಮಾಡಲು ಬರುವಂತಹದ್ದು, ಅರ್ಜಿದಾರ ಅರ್ಜಿಯ ಸಂಗಡ ಇದ್ದಂತಹ ಪತ್ರಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಯಿತು, ಅರ್ಜಿದಾರರು ಮೂಲ ಮಾಲೀಕರು ಅಲ್ಲದೆ ಇರುವುದರಿಂದ, ಬೇರೆ ರಾಜ್ಯದವರು ಆಗಿರುವುದರಿಂದ ಅರ್ಜಿದಾರರ ಅರ್ಜಿಯನ್ನು ತಿರಸ್ಕರಿಸಿ ದಿನಾಂಕ: 14.1.2000 ರಂದು ಕರ್ನಾಟಕ ಅರಣ್ಯ ಕಾಯ್ದೆ 1963ನೇ ಹಾಗೂ 71(ಎ) ಅಡಿಯಲ್ಲಿ ಮಧ್ಯಂತರ ಬಿಡುಗಡೆಗೆ ನೀಡಿದ ಅರ್ಜಿಯ ಮನವಿಯನ್ನು ತಿರಸ್ಕರಿಸಲಾಯಿತು.

4. ಈ ಮೊಕದ್ದಮೆಯ ಪೂರ್ಣ ತನಿಖೆ ದಾಖಲೆಯ ಪ್ರತಿಗಳನ್ನು ವಾಹನದ ಮಾಲೀಕರ ಪರ ನ್ಯಾಯವಾದಿಗಳಿಗೆ ಒದಗಿಸಲಾಗಿರುತ್ತದೆ. ಪ್ರಕರಣವನ್ನು ನ್ಯಾಯಾಂಗ ಕಲಾಪಗಳ ನಿರ್ವಹಣೆಯಲ್ಲಿ ಪ್ರಾಸಿಕ್ಯೂಷನ್ ಪರ ಪಿ.ಡಬ್ಲ್ಯೂ-1 ಮತ್ತು 2 ಸಾಕ್ಷಿಗಳನ್ನು ವಿಚಾರಿಸಿ ಹಾಗೂ ಸದರಿಯವರು ಸಾಕ್ಷಿ ವಿಚಾರಣೆಯಲ್ಲಿ ಪಾರದರ್ಶಕ ದಾಖಲೆ ನಿಶಾನೆ ಪಿ-1 ರಿಂದ ಪಿ-3 ಯನ್ನು ಗುರುತಿಸಿ ಈ ನ್ಯಾಯಾಂಗ ಕಲಾಪಗಳ ಸಾಕ್ಷಿ ವಿಚಾರಣೆ ಹಾಗೂ ಪ್ರದರ್ಶಿಸಿದ ದಾಖಲೆಗಳ ಆಧಾರದಲ್ಲಿ ತೆಗೆದುಕೊಳ್ಳಬೇಕಾದ ನಿರ್ಣಾಯಕ ಫಲಿತಾಂಶ ಮುಂದೆ ತಿಳಿಸಿದ ಅಂಶಗಳ ಮೇಲೆ ಅವಲಂಬಿತವಾಗಿರುವುದನ್ನು ಪ್ರತ್ಯೇಕವಾಗಿ ಚರ್ಚಿಸಿದೆ.

**5. ಅಂಶ:1.** ಆಪಾದನೆಗೆ ಒಳಗಾಗಿರುವ ಕಾರ್ ನಂ. ಪಿ.ವೈ-01 ಹೆಚ್-6442, ಹೊನ್ನಾಳಿ ಅರಣ್ಯ ಠಾಣೆ ತನಿಖಾಧಿಕಾರಿಗಳ ವರದಿ ಪೊಲೀಸ್ ಠಾಣಾ ಗುನ್ನೆ ಸಂ.9/99 ದಿನಾಂಕ:28.1.1999ರಲ್ಲಿ ಅಮಾನತ್ತುಪಡಿಸಿಕೊಂಡ ಶ್ರೀಗಂಧದ ತುಂಡುಗಳ ಸಾಗಾಟದಲ್ಲಿ ತೊಡಗಿರುವುದು ನಿಜವೇ?

2. ಹೌದಾದಲ್ಲಿ ಕಾರ್ ನಂ. ಪಿ.ವೈ-01 ಹೆಚ್-6442 ರಲ್ಲಿ ಸಾಗಿಸಿದ ಅಮಾನತ್ತುಪಡಿಸಿರುವ ಶ್ರೀಗಂಧದ ತುಂಡುಗಳು ಪೂರ್ಣವಾಗಿ ಸರ್ಕಾರಿ ಸೌಮ್ಯಕ್ಕೆ ಒಳಪಟ್ಟಿರುತ್ತದೆಯೇ?
3. ಹೌದಾದಲ್ಲಿ ಕಾರ್ ನಂ. ಪಿ.ವೈ-01 ಹೆಚ್-6442 ನ್ನು ಸರ್ಕಾರಿ ಸ್ವೌಮ್ಯದ ಶ್ರೀಗಂಧದ ತುಂಡುಗಳ ಸಾಗಾಟಕ್ಕಾಗಿ ವಾಹನದ ಮಾಲೀಕರು ಅಥವಾ ಏಜೆಂಟರು ಇವರುಗಳ ತಿಳುವಳಿಕೆ ಇಲ್ಲದಂತೆ ಉಪಯೋಗಿಸಿಕೊಳ್ಳಲಾಗಿದೆಯೇ?
4. ಹೌದಾದಲ್ಲಿ ಸರ್ಕಾರಿ ಸ್ವೌಮ್ಯದ ಶ್ರೀಗಂಧ ಕಳ್ಳ ಸಾಗಾಣಿಕೆಯಲ್ಲಿ ಕಾರ್ ನಂ.ಪಿ.ವೈ-01 ಹೆಚ್-6442 ಉಪಯೋಗವಾಗದಂತೆ ವಾಹನದ ಮಾಲೀಕರು ಅವಶ್ಯಕವಾದ ಮತ್ತು ಸಮಯೋಚಿತ ಮುನ್ನೆಚ್ಚರಿಕೆ ಕ್ರಮ ಕೈಗೊಂಡಿದ್ದಾರೆಯೇ? ಮತ್ತು
5. ಇಲ್ಲದಿದ್ದಲ್ಲಿ ಈ ಪೊಲೀಸ್ ಮೊಕದ್ದಮೆಯಲ್ಲಿ ಒಳಗೊಂಡಿದೆ ಎಂದು ಆಪಾದಿಸಿದ ಕಾರ್ ನಂ. ಪಿ.ವೈ-01 ಹೆಚ್-6442 ಸಲಕರಣೆ ಶ್ರೀಗಂಧದ ತುಂಡು ಅಮಾನತ್ತುಪಡಿಸಿರುವುದು ಇವುಗಳ ಸಲುವಾದ ಅರಣ್ಯ ಕಾಯ್ದೆ 1963ರ ವಿಧಿ 71(ಎ) 71(ಬಿ)ಗಳ ತೀರ್ಮಾನಗಳೇನು?

ಈ ಪ್ರಾಧಿಕಾರದ ಸಮಕ್ಷಮ ಜಾಹೀರುಗೊಂಡ ಸಾಕ್ಷಿಗಳಿಗೆ ಹೇಳಿಕೆ ಪಾರದರ್ಶಕ ದಾಖಲೆ ಫಿರ್ಯಾದು ವಾದ ಮತ್ತು ವಿವಾದವನ್ನು ಅವಲೋಕಿಸಿ ವಿಚಾರಣೆಯಲ್ಲಿ ಪರಿಶೀಲನೆಗೆ ಒಳಪಟ್ಟು ಮೇಲಿನ ಅಂಶಗಳ ತೀರ್ಮಾನ ಮುಂದೆ ತಿಳಿಸಿದಂತೆ ದೃಢಪಟ್ಟಿರುತ್ತದೆ.

ಪ್ರಾಸಿಕ್ಯೂಷನ್ ಸಾಕ್ಷಿ ಪಿ.ಡಬ್ಲ್ಯೂ-1 ಇವರು ಹೊನ್ನಾಳಿ ಪೊಲೀಸ್ ಠಾಣೆಯ ಪಿ.ಎಸ್.ಐ. ರವರಾಗಿದ್ದು ದಿನಾಂಕ: 11.1.1999ರ ಬೆಳಿಗ್ಗೆ 5 ಗಂಟೆ ಸಮಯದಲ್ಲಿ ಖಚಿತವಾದ ವರ್ತಮಾನ ಇದ್ದ ಕಾರಣ ಅವರು ಹಾಗೂ ಪಿ.ಸಿ.ನಂ. 386 ಮತ್ತು 346 ಇವರೊಂದಿಗೆ ಹೊನ್ನಾಳಿ-ಹರಿಹರ ರಸ್ತೆಯಲ್ಲಿರುವ ಚೆಕ್ ಪೋಸ್ಟ್ ಹತ್ತಿರ ಬಂದು ನಿಂತಾಗ ಶಿವಮೊಗ್ಗ ಕಡೆಯಿಂದ ಒಂದು ಕಾರು ಪಾಸಾಗಿ ಹರಿಹರ ಕಡೆ ಹೋಯಿತು ಅದನ್ನು ಸಿಬ್ಬಂದಿಯವರೊಂದಿಗೆ ಹಿಡಿಯಲು ಬೆನ್ನು ಹತ್ತಿದಾಗ ಕಾರನ್ನು ಮೀಸೆ ಮಾಯಪ್ಪ ಇವರ ಜಮೀನಿನ ಹತ್ತಿರ ನಿಲ್ಲಿಸಿ ಕಾರಿನಲ್ಲಿದ್ದ ಎರಡು ಜನ ಓಡಿ ಹೋದರು, ಕಾರನ್ನು ಪರಿಶೀಲಿಸಲಾಗಿ ಅದರೊಳಗೆ ಹಾಗೂ ಹಿಂಭಾಗದ ಡಿಕ್ಕಿಯಲ್ಲಿ ಶ್ರೀಗಂಧದ ತುಂಡುಗಳು ಇದ್ದವು, ಆಗ ಪಂಚರನ್ನು ಕರೆಯಿಸಿ ಪಂಚರ ಸಮಕ್ಷಮ ಕಾರಿನಲ್ಲಿರುವ ಶ್ರೀಗಂಧದ ತುಂಡು ಹೊರ ತೆಗೆದು ತೂಕ ಮಾಡಲಾಗಿ 150 ಕೆ.ಜಿ. ಇದ್ದು ಎಣಿಕೆ ಮಾಡಲಾಗಿ 145 ತುಂಡುಗಳು ಇದ್ದವು, ಆ ತುಂಡುಗಳಿಗೆ ಕೆಂಪು ಬಣ್ಣದಿಂದ 1 ರಿಂದ 145 ರವರೆಗೆ ನಂಬರನ್ನು ಕೊಡಲಾಯಿತು ಹಾಗೂ ಕಾರನ್ನು ಪರಿಶೀಲಿಸಿದಾಗ ಕಾರ್ ನಂ. ಪಿ.ವೈ-01 ಹೆಚ್-6442 ಇದ್ದು ಅದು ಮಾರುತಿ ಸುಜುಕಿ ಎಸ್ಟೀಮ್ ಕಾರಾಗಿರುತ್ತದೆ. ಇದೆಲ್ಲವನ್ನು ಪರಿಶೀಲಿಸಿದ ನಂತರ ಪಂಚರ ಸಮಕ್ಷಮ ಮಹಜರ್ ಕ್ರಮವನ್ನು ಜರುಗಿಸಿ ಶ್ರೀಗಂಧದ ತುಂಡುಗಳನ್ನು ಮತ್ತು ಕಾರನ್ನು ಜಪ್ತಿ ಮಾಡಿಕೊಂಡು ಪೊಲೀಸ್ ಠಾಣೆಗೆ ಬೆಳಿಗ್ಗೆ 9-30 ಗಂಟೆಗೆ ಬಂದು ಈ ಠಾಣೆಯ ಗುನ್ನೆ ನಂ. 9/99 ಎಂದು ದಾಖಲಿಸಿಕೊಂಡು ಅಂತಿಮ ವರದಿಯನ್ನು ಸಲ್ಲಿಸುವವರೆಗೆ ಜಪ್ತಿ ಮಾಡಿಕೊಂಡ ಶ್ರೀಗಂಧದ ತುಂಡುಗಳು ಮತ್ತು ಕಾರು ಪೊಲೀಸರ ವಶದಲ್ಲಿಟ್ಟುಕೊಳ್ಳಲು ಮಾನ್ಯ ಜೆ.ಜೆ.ಎಂ.ಎಫ್.ಸಿ. ಹೊನ್ನಾಳಿ ಇವರಲ್ಲಿ ಪರವಾನಿಗೆ ಕೋರಿ ಸೊತ್ತಿನ ಪಟ್ಟಿಯೊಂದಿಗೆ ಪ್ರಥಮ ವರ್ತಮಾನ ವರದಿಯೊಂದಿಗೆ ನಿವೇದಿಸಿಕೊಂಡು ಪ್ರಥಮ ವರ್ತಮಾನ ವರದಿಯ ನಕಲನ್ನು ಮೇಲಾಧಿಕಾರಿಗಳಿಗೆ ಕಳುಹಿಸಿದ್ದು ಅನಂತರ ಸಿ.ಪಿ.ಐ ಹೊನ್ನಾಳಿ ಇವರು ದಿನಾಂಕ: 28.1.1999 ರಂದು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ದಾವಣಗೆರೆ ಇವರಿಗೆ ಮುಂದಿನ ಕ್ರಮದ ಬಗ್ಗೆ ಮಾಲನ್ನು ಸ್ವೀಕರಿಸಲು ನಿವೇದಿಸಿರುತ್ತಾರೆ. ಆ ದಿನ ದಿನಾಂಕ: 11.1.1999 ರಂದು ಮಾಡಿದ ಮಹಜರನ್ನು ನಾನು ಈಗ ನೋಡಿದೆನು ಅದು ನಿಶಾನೆ ಪಿ-1 ಎಂದು ಗುರುತಿಸಲಾಯಿತು ಹಾಗೂ ನಾನು ದಾಖಲಿಸಿಕೊಂಡಿದ್ದ ಸ್ವ-ದೂರನ್ನು ಈಗ ನೋಡಿದೆನು ಅದು ನಿಶಾನೆ ಪಿ-2 ಎಂದು ಹಾಗೂ ಅದರಲ್ಲಿರುವ ಸಹಿಯನ್ನು ನಿಶಾನೆ ಪಿ-2 (ಎ) ಎಂದು ಗುರುತಿಸಲಾಯಿತು ಹಾಗೂ ಜಪ್ತಿ ಮಾಡಿದ ಕಾರನ್ನು ಮತ್ತು ಶ್ರೀಗಂಧದ ತುಂಡುಗಳನ್ನು ನೋಡಿದರೆ ನಾನು ಗುರುತಿಸುವೆನು ಎಂದು ಸಾಕ್ಷಿಯನ್ನು ನುಡಿದರು.

ಪಿ.ಡಬ್ಲ್ಯೂ-2 ಪಂಚನಾಮೆಗೆ ಸಾಕ್ಷಿದಾರರಾಗಿದ್ದು ನಾನು ದಿನಾಂಕ: 11.1.1999ರ ಬೆಳಿಗ್ಗೆ 6-30 ಗಂಟೆಗೆ ಚಂದ್ರಶೇಖರಪ್ಪ ಎನ್ನುವರ ಜೊತೆಗೆ ಶೇಂಗಾ ಮಾರಲು ದಾವಣಗೆರೆಗೆ ಬಿದಿರುಗಡ್ಡೆಯಿಂದ ಹೊನ್ನಾಳಿ-ಹರಿಹರ ರಸ್ತೆಯ ಫಾರೆಸ್ಟ್ ಚೆಕ್ ಪೋಸ್ಟ್ ಹತ್ತಿರ ನಡೆದುಕೊಂಡು ಬರುತ್ತಿರುವಾಗ ಪೊಲೀಸರು ನಮ್ಮನ್ನು ನಿಲ್ಲಿಸಿ ಹೊನ್ನಾಳಿ-ಹರಿಹರ ರಸ್ತೆಯ ಮೀಸೆ ಮಾಯಪ್ಪ ಎನ್ನುವವರ ಜಮೀನಿನ ಹತ್ತಿರ ಅಕ್ರಮವಾಗಿ ಶ್ರೀಗಂಧದ ತುಂಡುಗಳನ್ನು ತೆಗೆದುಕೊಂಡು ಹೋಗುತ್ತಿದ್ದ ಕಾರನ್ನು ನಿಲ್ಲಿಸಿದ್ದೇವೆ, ಪಂಚರಾಗಿ ಬರುವಂತೆ ಕೇಳಿಕೊಂಡ ಮೇರೆಗೆ ನಾವಿಬ್ಬರು ಕಾರಿನ ಹತ್ತಿರ ಬಂದೆವು, ಆಗ ಪಿ.ಎಸ್.ಐ ರವರು ಶ್ರೀಗಂಧದ ತುಂಡುಗಳನ್ನು ತೋರಿಸಿದರು. ಅವರು ನಮ್ಮ ಸಮಕ್ಷಮ ಲೆಕ್ಕ ಮಾಡಿದಾಗ 145 ತುಂಡುಗಳು ಇದ್ದು ತೂಕ ಮಾಡಿದಾಗ 150 ಕೆ.ಜಿ. ಇತ್ತು. ತುಂಡುಗಳನ್ನು ಕೆಂಪು ಬಣ್ಣದಿಂದ ಗುರುತನ್ನು ಮಾಡಿ ಕಾರನ್ನು ಪರಿಶೀಲಿಸಿದಾಗ ಅದರ ನಂ. ಪಿ.ವೈ-01-ಹೆಚ್ 6442 ಎಂದು ಇತ್ತು, ಕಾರು ಮತ್ತು ಶ್ರೀಗಂಧದ ತುಂಡುಗಳನ್ನು ನಮ್ಮ ಸಮಕ್ಷಮ ಅಮಾನತ್ತುಪಡಿಸಿಕೊಂಡು ಮಹಜರ್‌ನ್ನು ಬರೆದರು, ಮಹಜರ್‌ನ್ನು ಬೆಳಿಗ್ಗೆ 7 ಗಂಟೆಯಿಂದ 9 ಗಂಟೆಯವರೆಗೆ ಬರೆದು ಮಹಜರ್ ಓದಿ ಹೇಳಿದ ನಂತರ ನಾವಿಬ್ಬರು ಸಹಿ ಮಾಡಿದೆವು, ಆ ದಿನ ಮಾಡಿದ ಮಹಜರ್‌ನಲ್ಲಿರುವ ಸಹಿಯನ್ನು ಗುರುತಿಸಿದೆನು, ಅದು ನನ್ನದೇ ಸಹಿ ಆಗಿರುತ್ತದೆ. ಅದನ್ನು ನಿಶಾನೆ ಪಿ-3 ಎಂದು ಗುರುತಿಸಲಾಯಿತು.

ಈ ಮೊಕದ್ದಮೆಯ ಆರೋಪಿ/ವಕೀಲರು ಪಾಟಿ ಸವಾಲು ಮಾಡಲು ಅವಕಾಶ ಮಾಡಿಕೊಟ್ಟರೂ ಸಹ ಸತತವಾಗಿ ದಿನಾಂಕ: 24.7.2004, 6.8.2004, 31.8.2004 ಮತ್ತು 15.10.2004 ರಿಂದ ಗೈರು ಹಾಜರು ಆಗಿರುವರು.

ಈ ಮೊಕದ್ದಮೆಯ ಫಿರ್ಯಾದುದಾರರಾದ ಶ್ರೀ ರಂಗಧಾಮಯ್ಯ, ಆರಕ್ಷಕ ಉಪ ನಿರೀಕ್ಷಕರು, ನಿವೃತ್ತಿ ಹೊಂದಿದ್ದರಿಂದ ಅವರಿಗೆ ಬಹಳಷ್ಟು ಪತ್ರವನ್ನು ಬರೆದು ಕೇಸಿನ ಬಗ್ಗೆ ಸಾಕ್ಷಿಯನ್ನು ಕೊಡಲು ಹೇಳಿದ್ದರ ಮೇರೆಗೆ ಅವರು ಈ ನ್ಯಾಯಾಲಯಕ್ಕೆ ಸತತವಾಗಿ ಗೈರು ಹಾಜರಾಗಿರುವರು, ಆದರೂ ನಿಮ್ಮ ಸಾಕ್ಷಿ ಈ ನ್ಯಾಯಾಲಯಕ್ಕೆ ಅವಶ್ಯಕತೆ ಇದೆ ಎಂದು ಹೇಳಿದ ಮೇರೆಗೆ ಅವರು ದಿನಾಂಕ: 3.7.2004 ರಂದು ನನಗೆ ಮಧುಗಿರಿಯಿಂದ ದಾವಣಗೆರೆಗೆ ಬಂದು ಹೋಗುವ ಖರ್ಚಿನ ಬಾಬ್ತು ರೂ.200/- ಕೊಟ್ಟರೆ ಮಾತ್ರ ಬರುತ್ತೇನೆ ಎಂದು ತಿಳಿಸಿದ ಮೇರೆಗೆ ಈ ನ್ಯಾಯಾಲಯವು ದಿನಾಂಕ: 6.7.2004 ರಂದು ಅವರು ಕೇಳಿದ ವೆಚ್ಚವನ್ನು ಭರಿಸಲು ಸಮ್ಮತಿ ಕೊಟ್ಟ ಕಾರಣ ಪ್ರಥಮವಾಗಿ ದಿನಾಂಕ: 24.7.2004 ರಂದು ಕೋರ್ಟಿಗೆ ಹಾಜರಾಗಿ ಸಾಕ್ಷಿಯನ್ನು ಕೊಟ್ಟಿರುವರು, ಅಲ್ಲದೆ ಆರೋಪಿ ಪರ ವಕೀಲರಿಗೆ ಸಾಕಷ್ಟು ಅವಕಾಶ ಮಾಡಿಕೊಟ್ಟರೂ ಕೂಡ ಅವರು ಪಿ.ಡಬ್ಲ್ಯೂ-1 ಮತ್ತು 2 ಈ ಪ್ರಾಧಿಕಾರದ ಮುಂದೆ ಹಾಜರಾಗಿದ್ದರೂ ಕೂಡ ಆರೋಪಿ ಪರ ವಕೀಲರು ಸತತವಾಗಿ ಗೈರು ಹಾಜರಾಗಿರುವುದರಿಂದ ಈ ಪ್ರಾಧಿಕಾರವು ಪಾಟಿ ಸವಾಲು ಇಲ್ಲವೆಂದು ತೀರ್ಮಾನಿಸಿತು.

ಈ ವಿಚಾರಣಾ ಸಮಯದಲ್ಲಿ ನಿಶಾನೆ ಪಿ-1, ಪಿ-2, ಪಿ-2ಎ ಮತ್ತು ಪಿ-3 ಇವುಗಳನ್ನು ಪರಿಶೀಲಿಸಿದಾಗ ಹಾಗೂ ಸಹಾಯಕ ಅಭಿಯೋಗ ನಿರ್ದೇಶಕರು ಪಿಡಬ್ಲ್ಯೂ-1 ಮತ್ತು ಪಿಡಬ್ಲ್ಯೂ-2 ರವರಿಗೆ ಮಾಡಿರುವ ಮುಖ್ಯ ಸವಾಲುಗಳನ್ನು ಪರಿಶೀಲಿಸಿದಾಗ ಈ ವಾಹನವು ಅಕ್ರಮವಾಗಿ ಶ್ರೀಗಂಧದ ತುಂಡುಗಳನ್ನು ಸಾಗಿಸಲು ಉಪಯೋಗಿಸಿರುವುದು ಖಚಿತವಾಗಿರುತ್ತದೆ. ಈ ಪ್ರಾಧಿಕಾರವು ಆರೋಪಿ ಅವರ ವಕೀಲರಿಗೆ ಸಾಕಷ್ಟು ಕಾಲಾವಕಾಶ ಮಾಡಿಕೊಟ್ಟರೂ ಸಹ ಈ ಮೊಕದ್ದಮೆಯ ಸಾಕ್ಷಿಗಳಿಗೆ ಪಾಟಿ ಸವಾಲು ಮಾಡಲು ಸತತವಾಗಿ ಗೈರು ಹಾಜರಾಗಿರುವುದರಿಂದ ತೀರ್ಮಾನವನ್ನು ಧನಾತ್ಮಕ ಇರುವಂತೆ ಹೊರಡಿಸಿದೆ.

**ಆದೇಶ**

ಕರ್ನಾಟಕ ಅರಣ್ಯ ಕಾಯ್ದೆ 1963 ರ ವಿಧಿ 71ಎ ಮತ್ತು 72ಬಿ ಅಡಿಯಲ್ಲಿ ವಿಧಿತವಾದ ಅಧಿಕಾರವನ್ನು ಚಲಾಯಿಸುತ್ತಾ, ಪ್ರಾಧಿಕೃತ ಅಧಿಕಾರಿ ಮತ್ತು ದಾವಣಗೆರೆ ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬಿ. ಗೋಪಾಲನಾಯ್ಕ ಆದ ನಾನು ಹೊನ್ನಾಳಿ ವಲಯದ ತಕ್ಷೀರು ನಂ. 9/99 ದಿನಾಂಕ: 10.1.1999 ಕ್ಕೆ ಸಂಬಂಧಿಸಿದ ಅಮಾನತ್ತುಪಡಿಸಿದ ಶ್ರೀಗಂಧದ ತುಂಡುಗಳು 145 (150 ಕೆ.ಜಿ) ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ. ಈ ಪ್ರಕರಣದಲ್ಲಿ ಮುಟ್ಟುಗೋಲು ಹಾಕಿಕೊಳ್ಳಲಾದ ಶ್ರೀಗಂಧದ ತುಂಡುಗಳನ್ನು ಕರ್ನಾಟಕ ಅರಣ್ಯ ಕಾಯ್ದೆ 1963 ವಿಧಿ 84, 87 ಹಾಗೂ ರೂಲ್ 109 ರಂತೆ ವಲಯ ಅರಣ್ಯಾಧಿಕಾರಿ, ಹೊನ್ನಾಳಿ ಇವರು ಸ್ವಾಧೀನ ತೆಗೆದುಕೊಂಡು ನಿಯಮಾನುಸಾರ ವಿಲೇ ಮಾಡುವುದು.

ವಾಹನ ಮಾರುತಿ ಎಸ್ಟೀಮ್ ಕಾರ್ ನೊಂದಣೆ ಸಂಖ್ಯೆ.ಪಿವೈ-01-ಹೆಚ್ 6442 ಅನಧಿಕೃತವಾಗಿ ಶ್ರೀಗಂಧದ ತುಂಡುಗಳನ್ನು ಅಕ್ರಮ ಸಾಗಾಟ ಮಾಡಿ ತಂದಿರುವುದರಿಂದ ಕರ್ನಾಟಕ ಅರಣ್ಯ ಕಾಯ್ದೆ 1963 ವಿಧಿ 84, 87 ಹಾಗೂ ರೂಲ್ 109 ರಂತೆ ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ. ಸದರಿ ವಾಹನ ಮತ್ತು ಶ್ರೀಗಂಧವು ಎಲ್ಲಾ ಋಣಭಾರಗಳಿಂದ ಮುಕ್ತವಾಗಿದೆ ಎಂದು ಘೋಷಿಸಿರುತ್ತೇನೆ. ಈ ಆದೇಶವನ್ನು ದಿನಾಂಕ: 28.10.2004 ರಂದು ಈ ಪ್ರಾಧಿಕಾರದ ಮೊಹರ್ ಸಹಿತ ನನ್ನ ಸಹಿಯೊಂದಿಗೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿವಸಗಳೊಳಗಾಗಿ ಅರ್ಜಿದಾರರಾಗಲಿ ಅಥವಾ ಅವರ ಪರ ನ್ಯಾಯವಾದಿಗಳಾಗಲಿ ಮೇಲ್ಮನವಿಯನ್ನು ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**ಬಿ. ಗೋಪಾಲನಾಯ್ಕ**

ಪಿ.ಆರ್. 1628 ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ದಾವಣಗೆರೆ ವಿಭಾಗ, ದಾವಣಗೆರೆ.

**ಕಾರ್ಮಿಕ ಇಲಾಖೆ**

**ಅಧಿಸೂಚನೆ ಸಂಖ್ಯೆ: ಕಾಇ 40 ಕಾಬಾಸೇ 2004, ಬೆಂಗಳೂರು, ದಿನಾಂಕ: 9ನೇ ನವೆಂಬರ್ 2004**

ಶ್ರೀ ಎಸ್.ಎಂ. ವಾಸಣ್ಣ, ಬಾಯ್ಲರುಗಳ ಹಿರಿಯ ಸಹಾಯಕ ನಿರ್ದೇಶಕರು, ಹುಬ್ಬಳ್ಳಿ ವಿಭಾಗ, ಹುಬ್ಬಳ್ಳಿ, ಇವರಿಗೆ ವೇತನ ಶ್ರೇಣಿ ರೂ.9580-14200ರ ಬಾಯ್ಲರುಗಳ ಉಪ ನಿರ್ದೇಶಕರ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಸ್ಥಾನಾಪನ್ನ ಮುಂಬಡ್ತಿ ನೀಡಿ ದಾವಣಗೆರೆ ವಿಭಾಗದಲ್ಲಿ ಖಾಲಿ ಇರುವ ಬಾಯ್ಲರುಗಳ ಉಪ ನಿರ್ದೇಶಕರ ಹುದ್ದೆಯಲ್ಲಿ ನೇಮಿಸಿ ಆದೇಶ ಹೊರಡಿಸಿದೆ.

**ವಿಮಲಾಕುಮಾರಿ**

ಪಿ.ಆರ್. 1629 ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ, (ಕಾರ್ಖಾನೆ ಮತ್ತು ಬಾಯ್ಲರುಗಳು)

**ಕಾರ್ಮಿಕ ಇಲಾಖೆ**

**ಅಧಿಸೂಚನೆ ಸಂಖ್ಯೆ: ಕಾಇ 35 ಕಾಬಾನಿ 98, ಬೆಂಗಳೂರು, ದಿನಾಂಕ: 10ನೇ ನವೆಂಬರ್ 2004**

ಸರ್ಕಾರದ ಅಧಿಸೂಚನೆ ಸಂಖ್ಯೆ: ಕಾಇ 35 ಕಾಬಾನಿ 98, ದಿನಾಂಕ:4.9.98ರ ಮೂಲಕ ಸರ್ಕಾರವು ರಚಿಸಿರುವ ಬೆಂಗಳೂರು (ನಗರ) ಜಿಲ್ಲಾ ಬಿಕ್ಕಟ್ಟು ಪರಿಹಾರ ಸಮಿತಿಯ ಕ್ರಮ ಸಂಖ್ಯೆ:16ರಲ್ಲಿ ಸದಸ್ಯ ಕಾರ್ಯದರ್ಶಿಯಾಗಿ ಕಾರ್ಖಾನೆಗಳ ಉಪ ಮುಖ್ಯ ಪರಿವೀಕ್ಷಕರು-2, ಬೆಂಗಳೂರು ಇವರನ್ನು ನೇಮಿಸಲಾಗಿತ್ತು. ಇದೀಗ ಇವರ ನೇಮಕಾತಿಯನ್ನು ರದ್ದುಪಡಿಸಿ ಇವರ ಬದಲಿಗೆ ಕಾರ್ಖಾನೆಗಳ ಉಪ ನಿರ್ದೇಶಕರು, ವಿಭಾಗ-3, ಬೆಂಗಳೂರು, ಇವರನ್ನು ಬೆಂಗಳೂರು "ಜಿಲ್ಲಾ ಬಿಕ್ಕಟ್ಟು ಪರಿಹಾರ ಸಮಿತಿಯ" ಸದಸ್ಯ ಕಾರ್ಯದರ್ಶಿಯನ್ನಾಗಿ ನೇಮಿಸಲಾಗಿದೆ.

**ವಿಮಲಾಕುಮಾರಿ**

ಪಿ.ಆರ್. 1630 ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ, (ಕಾರ್ಖಾನೆ ಮತ್ತು ಬಾಯ್ಲರುಗಳು)

**ಕಾರ್ಮಿಕ ಇಲಾಖೆ**

**ಅಧಿಸೂಚನೆ ಸಂಖ್ಯೆ: ಕಾಇ 118 ಕಾಬಾನಿ 98, ಬೆಂಗಳೂರು, ದಿನಾಂಕ: 10ನೇ ನವೆಂಬರ್ 2004**

ಸರ್ಕಾರದ ಅಧಿಸೂಚನೆ ಸಂಖ್ಯೆ: ಕಾಇ 118 ಕಾಬಾನಿ 98, ದಿನಾಂಕ:2.2.98ರ ಮೂಲಕ ಸರ್ಕಾರವು ರಚಿಸಿರುವ ಹಾವೇರಿ ಜಿಲ್ಲಾ ಬಿಕ್ಕಟ್ಟು ಪರಿಹಾರ ಸಮಿತಿಯ ಕ್ರಮ ಸಂಖ್ಯೆ:18ರಲ್ಲಿ ಸದಸ್ಯ ಕಾರ್ಯದರ್ಶಿಯಾಗಿ ಕಾರ್ಖಾನೆಗಳ ಪರಿವೀಕ್ಷಕರು(ಗದಗ ವಿಭಾಗ), ಹುಬ್ಬಳ್ಳಿ ಇವರನ್ನು ನೇಮಿಸಲಾಗಿತ್ತು. ಇದೀಗ ಇವರ ನೇಮಕಾತಿಯನ್ನು ರದ್ದುಪಡಿಸಿ ಇವರ ಬದಲಿಗೆ ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ವಿಭಾಗ-2, ಹುಬ್ಬಳ್ಳಿ, ಇವರನ್ನು ಹಾವೇರಿ "ಜಿಲ್ಲಾ ಬಿಕ್ಕಟ್ಟು ಪರಿಹಾರ ಸಮಿತಿಯ" ಸದಸ್ಯ ಕಾರ್ಯದರ್ಶಿಯನ್ನಾಗಿ ನೇಮಿಸಲಾಗಿದೆ.

**ವಿಮಲಾಕುಮಾರಿ**

ಪಿ.ಆರ್. 1631 ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ, (ಕಾರ್ಖಾನೆ ಮತ್ತು ಬಾಯ್ಲರುಗಳು)

**ಕಾರ್ಮಿಕ ಇಲಾಖೆ**

**ಅಧಿಸೂಚನೆ ಸಂಖ್ಯೆ: ಕಾಇ 138 ಕಾಬಾನಿ 98, ಬೆಂಗಳೂರು, ದಿನಾಂಕ: 10ನೇ ನವೆಂಬರ್ 2004**

ಸರ್ಕಾರದ ಅಧಿಸೂಚನೆ ಸಂಖ್ಯೆ: ಕಾಇ 138 ಕಾಬಾನಿ 98, ದಿನಾಂಕ:2.2.99ರ ಮೂಲಕ ಸರ್ಕಾರವು ರಚಿಸಿರುವ ದಕ್ಷಿಣ ಕನ್ನಡ ಜಿಲ್ಲಾ ಬಿಕ್ಕಟ್ಟು ಪರಿಹಾರ ಸಮಿತಿಯ ಕ್ರಮ ಸಂಖ್ಯೆ:18ರಲ್ಲಿ ಸದಸ್ಯ ಕಾರ್ಯದರ್ಶಿಯಾಗಿ ಕಾರ್ಖಾನೆಗಳ ಹಿರಿಯ ಪರಿವೀಕ್ಷಕರು, ಮಂಗಳೂರು ವಿಭಾಗ, ಮಂಗಳೂರು ಇವರನ್ನು ನೇಮಿಸಲಾಗಿತ್ತು. ಇದೀಗ ಇವರ ನೇಮಕಾತಿಯನ್ನು ರದ್ದುಪಡಿಸಿ ಇವರ ಬದಲಿಗೆ ಕಾರ್ಖಾನೆಗಳ ಉಪ ನಿರ್ದೇಶಕರು, ಮಂಗಳೂರು ವಿಭಾಗ, ಮಂಗಳೂರು ಇವರನ್ನು "ದಕ್ಷಿಣ ಕನ್ನಡ ಜಿಲ್ಲಾ ಬಿಕ್ಕಟ್ಟು ಪರಿಹಾರ ಸಮಿತಿಯ" ಸದಸ್ಯ ಕಾರ್ಯದರ್ಶಿಯನ್ನಾಗಿ ನೇಮಿಸಲಾಗಿದೆ.

**ವಿಮಲಾಕುಮಾರಿ**

ಪಿ.ಆರ್. 1632 ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ, (ಕಾರ್ಖಾನೆ ಮತ್ತು ಬಾಯ್ಲರುಗಳು)

**ಕಾರ್ಮಿಕ ಇಲಾಖೆ**

**ಅಧಿಸೂಚನೆ ಸಂಖ್ಯೆ: ಕಾಇ 100 ಕಾಬಾನಿ 98, ಬೆಂಗಳೂರು, ದಿನಾಂಕ: 10ನೇ ನವೆಂಬರ್ 2004**

ಸರ್ಕಾರದ ಅಧಿಸೂಚನೆ ಸಂಖ್ಯೆ: ಕಾಇ 100 ಕಾಬಾನಿ 98, ದಿನಾಂಕ:2.7.99ರ ಮೂಲಕ ಸರ್ಕಾರವು ರಚಿಸಿರುವ ಬೆಳಗಾಂ ಜಿಲ್ಲಾ ಬಿಕ್ಕಟ್ಟು ಪರಿಹಾರ ಸಮಿತಿಯ ಕ್ರಮ ಸಂಖ್ಯೆ:17ರಲ್ಲಿ ಸದಸ್ಯ ಕಾರ್ಯದರ್ಶಿಯಾಗಿ ಕಾರ್ಖಾನೆಗಳ ಹಿರಿಯ ಪರಿವೀಕ್ಷಕರು, ಬೆಳಗಾಂ ವಿಭಾಗ-1, ಬೆಳಗಾಂ

ಇವರನ್ನು ನೇಮಿಸಲಾಗಿತ್ತು. ಇದೀಗ ಇವರ ನೇಮಕಾತಿಯನ್ನು ರದ್ದುಪಡಿಸಿ ಇವರ ಬದಲಿಗೆ ಕಾರ್ಖಾನೆಗಳ ಉಪ ನಿರ್ದೇಶಕರು ವಿಭಾಗ-1, ಬೆಳಗಾಂ, ಇವರನ್ನು ಬೆಳಗಾಂ "ಜಿಲ್ಲಾ ಬಿಕ್ಕಟ್ಟು ಪರಿಹಾರ ಸಮಿತಿಯ" ಸದಸ್ಯ ಕಾರ್ಯದರ್ಶಿಯನ್ನಾಗಿ ನೇಮಿಸಲಾಗಿದೆ.

**ವಿಮಲಾಕುಮಾರಿ**

ಪಿ.ಆರ್. 1633 ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ, (ಕಾರ್ಖಾನೆ ಮತ್ತು ಬಾಯ್ಲರುಗಳು)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

### ಅಧಿಸೂಚನೆ ಸಂಖ್ಯೆ: ಸಿಆಸುಇ 139 ಸೇಇಮು 2004, ಬೆಂಗಳೂರು, ದಿನಾಂಕ: 30ನೇ ಅಕ್ಟೋಬರ್ 2004

ಶ್ರೀ ಜಿ.ವಿ. ನಾಯಕ್, ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಪ್ರಸ್ತುತ ನಿರ್ದೇಶಕರು, ಈಶಾನ್ಯ ವಲಯ, ಶೈಕ್ಷಣಿಕ ನಿರ್ದೇಶನಾಲಯ, ಗುಲ್ಬರ್ಗಾ ಇವರ ಜನ್ಮ ದಿನಾಂಕ:28.2.1947 ಆಗಿದ್ದು, ದಿನಾಂಕ:28.2.2005ರಂದು ಸೇವೆಯಿಂದ ವಯೋನಿವೃತ್ತಿ ಹೊಂದಲು ಅನುಮತಿ ನೀಡಲಾಗಿದೆ.

**ಯು.ಪಿ. ಪ್ರಭು**

ಪಿ.ಆರ್. 1634 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಂತಿಮ ಅಧಿಸೂಚನೆ ಸಂ:ಕೆಎಸ್ಎ/ಸಿಆರ್/26/03-04, ದಿನಾಂಕ: 16ನೇ ನವೆಂಬರ್ 2003

ಸಂ:ಕೆಎಸ್ಎ/ಸಿಆರ್/26/2003-04 ದಿ: 28.1.2004 ಪ್ರಿಲಿಮಿನರಿ ಅಧಿಸೂಚನೆಯನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿ ಅದರಲ್ಲಿ ಸದರಿ ಅಧಿಸೂಚನೆಯ ಷೆಡ್ಯೂಲ್‌ನಲ್ಲಿರುವ ಬೆಂಗಳೂರು ಕಾರ್ಪೊರೇಷನ್ ವ್ಯಾಪ್ತಿಗೆ ಬರುವ ಬೆಂಗಳೂರು ಉತ್ತರ ತಾಲ್ಲೂಕು ಯಶವಂತಪುರ ಹೋಬಳಿ ಮಾಳಗಾಳು ಸರ್ವೆ ನಂ. 44-45 ರಲ್ಲಿನ ಪಟ್ಟೇಗಾರ್ ಪಾಳ್ಯದ ರಾಜೀವ್ ಗಾಂಧೀನಗರ ಕೊಳಚೆ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ನಿರ್ಮೂಲನಾ ಮತ್ತು ಅಭಿವೃದ್ಧಿ) ಕಾಯ್ದೆ 1973ರ ಸೆಕ್ಷನ್ 3ರಡಿಯಲ್ಲಿ ಪ್ರಾರಂಭಿಕವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿ ಸಂಬಂಧಿಸಿದವರಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು.

ಸದರಿ ಪ್ರಿಲಿಮಿನರಿ ಅಧಿಸೂಚನೆಗೆ ಯಾರಿಂದಲೂ ಆಕ್ಷೇಪಣೆಗಳು ಬಂದಿರುವುದಿಲ್ಲ. ಪ್ರಶ್ನಿತ ಕೊಳಚೆ ಪ್ರದೇಶವನ್ನು ದಿ: 7.11.2003 ರಂದು ಸ್ಥಳ ಪರಿಶೀಲನೆ ಮಾಡಲಾಗಿದ್ದು ಪ್ರಶ್ನಿತ ಕೊಳಚೆ ಪ್ರದೇಶದಲ್ಲಿ ಸರ್ವೆ ನಂ. 44ರ 0-23 ಗುಂಟೆ ಮತ್ತು ಸರ್ವೆ ನಂ. 45 ರಲ್ಲಿ 0-14ಗುಂಟೆ ಒಟ್ಟು 0-37 ಗುಂಟೆ ಪ್ರದೇಶದಲ್ಲಿ ಸುಮಾರು 98 ಗುಡಿಸಲು ಹಾಗೂ ಶೀಟ್ ಮನೆಗಳು ಇರುತ್ತವೆ. 6 ಪಕ್ಕಾ ಮನೆಗಳು ಇರುತ್ತದೆ. ಈ ಪ್ರದೇಶದಲ್ಲಿ ರಸ್ತೆ ಸಮರ್ಪಕವಾಗಿ ಇರುವುದಿಲ್ಲ. ಒಳಚರಂಡಿ ವ್ಯವಸ್ಥೆ, ಸಮುದಾಯ ಶೌಚಾಲಯ ಚರಂಡಿ ಇತ್ಯಾದಿ ಇರುವುದಿಲ್ಲ. ಸದರಿ ಕೊಳಚೆ ಪ್ರದೇಶವನ್ನು ಅಭಿವೃದ್ಧಿಪಡಿಸುವುದು ಅತ್ಯಗತ್ಯವಾಗಿರುತ್ತದೆ. ಸದರಿ ಕೊಳಚೆ ಪ್ರದೇಶವನ್ನು ಅಂತಿಮವಾಗಿ ಕೊಳಚೆ ಪ್ರದೇಶವೆಂದು ಘೋಷಿಸಲು ಯಾವುದೇ ತಕರಾರು ಕಂಡು ಬಂದಿರುವುದಿಲ್ಲ.

ಆದ್ದರಿಂದ ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ದತ್ತವಾಗಿರುವ ಅಧಿಕಾರದಂತೆ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಮೇಲ್ಕಂಡ ಕಾಯ್ದೆಯ ಸೆಕ್ಷನ್ 3 ರಡಿಯಲ್ಲಿ ಅಂತಿಮವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿರುತ್ತೇನೆ.

**ಷೆಡ್ಯೂಲ್**

ಬೆಂಗಳೂರು ನಗರ ಕಾರ್ಪೊರೇಷನ್ ವ್ಯಾಪ್ತಿಯಲ್ಲಿ ಬರುವ ಬೆಂಗಳೂರು ಉತ್ತರ ತಾಲ್ಲೂಕು ಯಶವಂತಪುರ ಹೋಬಳಿ ಮಾಳಗಾಳು ಸರ್ವೆ ನಂಬರ್ 44, 45 ರಲ್ಲಿನ ಪಟ್ಟೇಗಾರಪಾಳ್ಯದ ರಾಜೀವ್‌ಗಾಂಧಿನಗರ ಕೊಳಚೆ ಪ್ರದೇಶದ ಚೆಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ.

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಕೊಳಚೆ ಪ್ರದೇಶದಲ್ಲಿರುವ ಜಮೀನಿನ ಮಾಲೀಕರ ಹೆಸರು | ಸರ್ವೆ ನಂ. | ವಿಸ್ತೀರ್ಣ | ಚೆಕ್ಕು ಬಂದಿಗಳು |
|---|---|---|---|---|---|
| 1. | ರಾಜೀವ್‌ಗಾಂಧಿನಗರ ಕೊಳಚೆ ಪ್ರದೇಶ ಪಟ್ಟೇಗಾರಪಾಳ್ಯ | 1. ಪಿಳ್ಳಮ್ಮ<br>2. ಕೆ.ಎಂ. ಚಂದ್ರಶೇಖರ್<br>3. ಕೆ.ಎಂ. ಜನಾರ್ಧನ್<br>4. ಸರ್ಕಾರಿ ಗುಂಡು ತೋಪು | 44ರ ಪೈಕಿ<br>45<br>**ಒಟ್ಟು** | ಎ-ಗು.<br>0-23<br>0-14<br>**0-37** | ಪೂರ್ವಕ್ಕೆ: ಸರ್ಕಾರಿ ಕೆರೆ ಮತ್ತು ಖಾಸಗಿ ನಿವೇಶನ<br>ಪಶ್ಚಿಮಕ್ಕೆ: ರಸ್ತೆ<br>ಉತ್ತರಕ್ಕೆ: ರಸ್ತೆ<br>ದಕ್ಷಿಣಕ್ಕೆ: ಖಾಸಗಿ ನಿವೇಶನಗಳು |

ಪಿ.ಆರ್. 1635 ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು

## ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು ಇವರ ನಡವಳಿಗಳು

**ವಿಷಯ:** ತುಮಕೂರು ತಾಲ್ಲೂಕು, ತುಮಕೂರು ಟೌನಿನ ಮಾರಿಯಮ್ಮ (ಇಂದಿರಾ ನಗರ) ಕೊಳಚೆ ಪ್ರದೇಶ ಬಡಾವಣೆಯನ್ನು ಅಧಿನಿಯಮ (3)ರಡಿಯಲ್ಲಿ ಕೊಳಚೆ ಪ್ರದೇಶ ಎಂದು ಘೋಷಿಸುವ ಬಗ್ಗೆ.

**ಉಲ್ಲೇಖ:** 1. ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಬೆಂಗಳೂರು ಇವರ ಪತ್ರ ಸಂ:ಕ.ಕೊ.ನಿ.ಮ:ರೆ:ಸಿ:ಘೋ/01-02, ದಿನಾಂಕ:4/7.9.04.

2. ಸಹಾಯಕ ಕಾರ್ಯಪಾಲಕ ಅಭಿಯಂತರರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ನಂ.3, ಉಪವಿಭಾಗ, ತುಮಕೂರುರವರ ಪತ್ರ:ಕಕೊನಿಮ/ಸಕಾಅ-3/ತುಮಕೂರು ಮರಿಯಮ್ಮ ನಗರ/04-05/458, ದಿ:8.11.04

**ಪ್ರಸ್ತಾವನೆ:**

ತುಮಕೂರು ಜಿಲ್ಲೆ ತುಮಕೂರು ಟೌನ್ ಮಾರಿಯಮ್ಮ (ಇಂದಿರಾ ನಗರ) ಬಡಾವಣೆಯಲ್ಲಿ ವಾಸದ ಮನೆಗಳು, ಗುಡಿಸಲುಗಳು ಒತ್ತೊತ್ತಾಗಿದ್ದು, ಜನರು ಸಾಮಾನ್ಯ ಸ್ಥಿತಿಯಲ್ಲಿ ವಾಸಿಸಲು ಅನಾನುಕೂಲತೆಯುಂಟಾಗಿದ್ದು ಹಾಲಿ ಇರುವ ಗುಡಿಸಲುಗಳು, ಮನೆಗಳು, ದುರಸ್ತಿಯಲ್ಲದೇ ಕುಡಿಯುವ ನೀರು, ರಸ್ತೆಗಳು, ರಸ್ತೆಬದಿ ದೀಪಗಳು, ಚರಂಡಿಗಳು ಮತ್ತು ಸಾರ್ವಜನಿಕ ಶೌಚಾಲಯ ಮುಂತಾದ ಮೂಲಭೂತವಾದ ಸೌಕರ್ಯಗಳು

ಇಲ್ಲದ ಪ್ರಯುಕ್ತ ಈ ಪ್ರದೇಶದಲ್ಲಿ ಅನಾರೋಗ್ಯಕರ ವಾತಾವರಣ ಉಂಟಾಗಿರುವುದಾಗಿಯೂ, ಈ ಪ್ರದೇಶವನ್ನು ಕೊಳಚೆ ನಿರ್ಮೂಲನಾ ಮಂಡಳಿಯ ವತಿಯಿಂದ ಅಭಿವೃದ್ಧಿಗೊಳಿಸುವ ಒಂದು ಸಾರ್ವಜನಿಕ ಉದ್ದೇಶ ಹೊಂದಿ ಈ ಪ್ರದೇಶವನ್ನು ಕೊಳಚೆ ಪ್ರದೇಶ ಎಂದು ಘೋಷಣೆ ಮಾಡಲು ಉದ್ದೇಶಿಸಿ ಕೊಳಚೆ ನಿರ್ಮೂಲನಾ ಮಂಡಳಿಯು ದಿನಾಂಕ:30.3.1996ರಂದು ನಡೆಸಲಾದ ಸಭೆಯ ವಿಷಯ ಸಂಖ್ಯೆ 6ರಲ್ಲಿ ತೆಗೆದುಕೊಂಡ ತೀರ್ಮಾನದಂತೆ ಉಲ್ಲೇಖ (1)ರ ಪತ್ರದಲ್ಲಿ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಬೆಂಗಳೂರು ಇವರು ಸ್ಥಳ ಪರಿಶೀಲಿಸಿ, ಪ್ರದೇಶದ ನಕ್ಷೆ ಮತ್ತು ಚಕ್ಕುಬಂದಿಗಳನ್ನು ಪರಿಶೀಲಿಸಿ ಈ ಬಗ್ಗೆ ಪುರಸಭೆ ತುಮಕೂರು ನಗರಸಭೆ ಆಯುಕ್ತರು ಇವರಿಂದ ನಿರಾಕ್ಷೇಪಣಾ ಪತ್ರವನ್ನು ಪಡೆದುಕೊಂಡು ಈ ಪ್ರದೇಶವು ತುಮಕೂರು ನಗರಸಭೆ ವ್ಯಾಪ್ತಿಯಲ್ಲಿರುವುದನ್ನು ಖಚಿತಪಡಿಸಿಕೊಂಡು ಈ ಪ್ರದೇಶವನ್ನು ಕೊಳಚೆ ಪ್ರದೇಶ ಎಂದು ಅಧಿಸೂಚನೆ ಹೊರಡಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ. ಈ ಬಗ್ಗೆ ದಿನಾಂಕ:8.11.2004 ರಂದು ಸ್ಥಳ ತನಿಖೆ ನಡೆಸಿ ಇದರ ಪ್ರಸ್ತಾವನೆಯನ್ನು ಪರಿಶೀಲಿಸಿ, ಯುಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಕ್ರಮಾಂಕ:ಡಿ.ಯು.ಡಿ.ಸಿ(1)ಸಿ.ಆರ್:229/04-05 ತುಮಕೂರು, ದಿನಾಂಕ: 9ನೇ ನವೆಂಬರ್ 2004**

ತುಮಕೂರು ಜಿಲ್ಲೆ ತುಮಕೂರು ಟೌನ್‌ನ ವ್ಯಾಪ್ತಿಯಲ್ಲಿ ಬರುವ ಮಾರಿಯಮ್ಮ (ಇಂದಿರಾ ನಗರ) ಬಡಾವಣೆ ಪ್ರದೇಶವು ಕೊಳಚೆ ಪ್ರದೇಶ ಎಂದು ಕಂಡು ಬಂದಿರುವುದರಿಂದ ಈ ಪ್ರದೇಶವನ್ನು ಕೊಳಚೆ ನಿರ್ಮೂಲನಾ ಮಂಡಳಿಯು ಅಭಿವೃದ್ಧಿಪಡಿಸುವ ಒಂದು ಸಾರ್ವಜನಿಕ ಉದ್ದೇಶಕ್ಕಾಗಿ ಈ ಪ್ರದೇಶಗಳನ್ನು ಕೊಳಚೆಪ್ರದೇಶ ಎಂದು ಕರ್ನಾಟಕ ಕೊಳಚೆ ನಿರ್ಮೂಲನಾ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯಿದೆ 1979ರ ಕಲಂ (3)ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸಿ ತುಮಕೂರು ನಗರಸಭೆ ವ್ಯಾಪ್ತಿಯ ಮಾರಿಯಮ್ಮ (ಇಂದಿರಾ ನಗರ) ಕೊಳಚೆ ಪ್ರದೇಶವನ್ನು ಕೊಳಚೆ ಪ್ರದೇಶ ಎಂದು ಘೋಷಿಸಿ ಪ್ರಾರಂಭಿಕ ಅಧಿಸೂಚನೆಯನ್ನು ಹೊರಡಿಸಲಾಗಿದೆ.

ಪಿ.ಆರ್. 1636 ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-2, ಬಿಜಾಪುರ**
**ಪ್ರಕರಣ ಸಂಖ್ಯೆ:ಕಾಅಬ:ಕಾನಪ:ಮೆಪ್ರ/ಎಸ್‌ಆರ್. ನಂ-185/2004, ದಿನಾಂಕ: 17ನೇ ನವೆಂಬರ್ 2004**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1. ಶ್ರೀಮತಿ ಜಯಶ್ರೀ ಗಂಡ ಬಾಗಣ್ಣ ಕಾಳೆ
2. ಶ್ರೀ ಪರಸಪ್ಪ ತಂದೆ ರೈತಪ್ಪ ಕಾಳೆ
3. ಶ್ರೀಮತಿ ಬೌರವ್ವ ಗಂಡ ಪರಸಪ್ಪ ಕಾಳೆ ಎಲ್ಲರ
**ವಾಸ:-** ಜಲನಗರ, ಬಿಜಾಪುರ ತಾ: ಬಿಜಾಪುರ.

1. ಶ್ರೀ ಶಮಸೇರ ಬಾಬೂ ಮುಲ್ಲಾ ಸಾ: ಕುರಘೋಟ ಪೋಸ್ಟ್-ಟಾಕಳಿ, ತಾಲ್ಲೂಕ-ದಕ್ಷಿಣ ಸೊಲ್ಲಾಪೂರ, ಜಿಲ್ಲೆ-ಸೊಲ್ಲಾಪೂರ ಮಹಾರಾಷ್ಟ್ರ ರಾಜ್ಯ.
2. ದಿ ಬ್ರಾಂಚ್ ಮ್ಯಾನೇಜರ್, ದಿ ಓರಿಯಂಟಲ್ ಇನ್ಶೂರೆನ್ಸ್ ಕಂಪನಿ ಲಿಮಿಟೆಡ್, ಬಿಜಾಪುರ.

**ಪ್ರಕಟಣೆ**

ಶ್ರೀ:ಶ್ರೀಮತಿ 1) ಶ್ರೀಮತಿ ಜಯಶ್ರೀ ಗಂಡ ಬಾಗಣ್ಣ ಕಾಳೆ 2) ಶ್ರೀ ಪರಸಪ್ಪ ತಂದೆ ರೈತಪ್ಪ ಕಾಳೆ 3) ಶ್ರೀಮತಿ ಬೌರವ್ವ ಗಂಡ ಪರಸಪ್ಪ ಕಾಳೆ ಇವರುಗಳಾದ ತಾವು ಮೃತ ಬಾಗಣ್ಣ ಕಾಳೆ ಇವರ ಹೆಂಡತಿ ಮತ್ತು ತಂದೆ-ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಬಾಗಣ್ಣ ಕಾಳೆ ಇವರು ಒಂದನೇ ಪ್ರತಿವಾದಿಗಳಾದ ಶ್ರೀ ಶಮಸೇರ ಬಾಬೂ ಮುಲ್ಲಾ ಇವರ 407 ಗೂಡ್ಸ್ ಟೆಂಪೊ ರಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ದಲಿಂಗಪ್ಪ ಆಲೂರು**
ಪಿ.ಆರ್. 1609 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಪವಿಭಾಗ-2, ಬಿಜಾಪುರ.

**ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ಕೊಪ್ಪಳ**
**ಪ್ರಕರಣ ಸಂಖ್ಯೆ:ಕಾಅಕೊ:ಕಾನಪ:F/342:2004, ದಿನಾಂಕ: 18ನೇ ನವೆಂಬರ್ 2004**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1. ಶ್ರೀಮತಿ ಸರಸ್ವತಿ ಗಂಡ ವೆಂಕಟೇಶ ನಾಯ್ಕ
2. ಚಂದ್ರವ್ವ ಗಂಡ ದಾನಪ್ಪ ನಾಯ್ಕ
3. ದಾನಪ್ಪ ನಾಯ್ಕ ತಂದೆ ಜಗನ ನಾಯ್ಕ
R/o ಕೌಲಿ ಥಾಂಡಾ ಪೊ।। ಬಂಡಿಹರ್ಲಾಪೂರ. ತಾ।।ಜಿ।। ಕೊಪ್ಪಳ.

1. ಶ್ರೀ ಮೊಹ್ಮದ ಮೋಸಿನ ತಂದೆ ಮೊಹ್ಮದ ಉಸ್ಮಾನ ಹೊಸಪೇಟೆ.
2. ಡಿವಿಜನಲ್ ಮ್ಯಾನೇಜರ್, ನ್ಯಾಷನಲ್ ಇನ್ಶೂರೆನ್ಸ್ ಕಂ. ಲಿ., ಬಳ್ಳಾರಿ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ:ಗಾಯ:ಶ್ರೀ:ಶ್ರೀಮತಿ: ವೆಂಕಟೇಶ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ಕೆಲಸದಿಂದುಂಟಾದ ಅಪಘಾತದಿಂದ ಮೃತ:ಗಾಯ:ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923 ರಡಿ ಪರಿಹಾರ ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಮೃತ:ಗಾಯ: ವೆಂಕಟೇಶ್ ರವರ ವಾರಸುದಾರರಾದ ಶ್ರೀ:ಶ್ರೀಮತಿ ಸರಸ್ವತಿ ಹಾಗೂ ಇತರರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರೂ ಅಥವಾ ತಾವೂ ಸಹ ಮೃತ:ಗಾಯ: ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನದೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದ್ರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿಗಳು ಬಾರದಿದ್ದಲ್ಲಿ ಸದ್ರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಪಿ.ಆರ್. 1610 ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೊಪ್ಪಳ ಜಿಲ್ಲೆ, ಕೊಪ್ಪಳ.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ**

**ಅಧಿಸೂಚನೆ ಸಂಖ್ಯೆ: ಸಿಆಸುಇ 382 ಆಸೇಇ 2004, ಬೆಂಗಳೂರು, ದಿನಾಂಕ: 3ನೇ ನವೆಂಬರ್ 2004**

ಶ್ರೀ ಎಸ್. ಕೃಷ್ಣ, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಹಾಲಿ ಯೋಜನಾ ನಿರ್ದೇಶಕರು, ಡಿ.ಆರ್.ಡಿ.ಎ. ಕೋಶ, ಜಿಲ್ಲಾ ಪಂಚಾಯತ್, ಕೋಲಾರ ಇವರು ದಿನಾಂಕ:12.5.2004 ರಿಂದ 19.5.2004 ರವರೆಗೆ ಕಳೆದ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958ರ ನಿಯಮ 76ರ ಪ್ರಕಾರ ವರ್ಗಾವಣೆ ಸೇರುವಿಕೆ ಕಾಲ ಎಂದು ಪರಿಗಣಿಸಿ ಆದೇಶಿಸಿದೆ.

**ಯು.ಪಿ. ಪ್ರಭು**

ಪಿ.ಆರ್. 1638 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

**ಸಹಕಾರ ಇಲಾಖೆ**

**ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ರವರ ನ್ಯಾಯಾಲಯ**

**ದಾವಾ ಅರ್ಜಿ ನಂ.ಡಿಆರ್‌ಎಸ್:ಡಿಡಿಎಸ್:6:2004-05:1268**

**ವಾದಿ** ವಿರುದ್ಧ **ಪ್ರತಿವಾದಿಯವರು**

ಕಾರ್ಯದರ್ಶಿ,
ಅಡಿಕೆ ಪರಿಷ್ಕರಣ ಮತ್ತು ಮಾರಾಟ ಸಹಕಾರ ಸಂಘ ನಿ.,
ಸಾಗರ, ಶಿವಮೊಗ್ಗ ಜಿಲ್ಲೆ.

ಶ್ರೀ ಅಶ್ವಿನ್‌ಕುಮಾರ್
ಅಡಿಕೆ ವ್ಯಾಪಾರಿಗಳು, ನಂ.5, ಎಪಿಎಂಸಿ ಯಾರ್ಡ್,
ಸಾಗರ-577 401 ಶಿವಮೊಗ್ಗ ಜಿಲ್ಲೆ.

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಚರ ಮತ್ತು ಸ್ಥಿರಾಸ್ತಿಯನ್ನು ಅಟ್ಯಾಚ್ ಮಾಡಿರುವುದನ್ನು ಸ್ಥಿರೀಕರಿಸುವ ಬಗ್ಗೆ.**

**ಆದೇಶ**

ವಾದಿ ಸಹಕಾರ ಸಂಘದವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 70 ರನ್ವಯ ಈ ನ್ಯಾಯಾಲಯದಲ್ಲಿ ದಾವೆ ಹೂಡಿ ಅರ್ಜಿಯಲ್ಲಿ ಪ್ರತಿವಾದಿಯಿಂದ ರೂ.25,94,964-00 ಗಳನ್ನು ದಿನಾಂಕ: 1.7.2004 ರಿಂದ ಶೇ. 15 ರ ಬಡ್ಡಿ ಮತ್ತು ಕೋರ್ಟ್ ಖರ್ಚು ಸಮೇತ ವಸೂಲಿ ಮಾಡಲು ಆದೇಶಕ್ಕಾಗಿ ದಾವಾ ನಂ.ಡಿಆರ್‌ಎಸ್:ಡಿಡಿಎಸ್:6:04-05ರಲ್ಲಿ ದಾವೆ ಅರ್ಜಿಯನ್ನು ದಿನಾಂಕ: 26.7.2004 ರಲ್ಲಿ ಸಲ್ಲಿಸಿರುತ್ತಾರೆ. ಈ ದಾವೆ ಅರ್ಜಿಯ ಜೊತೆಗೆ ಕಾಯ್ದೆ ಕಲಂ 103 ರನ್ವಯ ಎದುರು ಅರ್ಜಿದಾರರ ಕೆಳಕಾಣಿಸಿದ ಷೆಡ್ಯೂಲ್ ಚರ-ಸ್ಥಿರಾಸ್ತಿಯನ್ನು ತೀರ್ಪಿಗೆ ಮುನ್ನ ಜಪ್ತಿ ಮಾಡಲು ಆದೇಶ (Attachment before Judgement) ಕೋರಿ ಅರ್ಜಿ ಸಲ್ಲಿಸಿರುತ್ತಾರೆ.

ಅರ್ಜಿದಾರರು ಈ ಅರ್ಜಿಯೊಂದಿಗೆ ಸಲ್ಲಿಸಿರುವ ಸ್ಥಿರಾಸ್ತಿ ಷೆಡ್ಯೂಲ್ ಆಸ್ತಿಯ ದೃಢೀಕೃತ ರೆಕಾರ್ಡ್ ಆಫ್ ರೈಟ್ (ಆರ್.ಟಿ.ಸಿ) ದಾಖಲೆಯ ಆಧಾರದ ಮೇರೆಗೆ, ಈ ನ್ಯಾಯಾಲಯದ ನೋಟೀಸ್ ದಿನಾಂಕ: 2.8.2004ರಲ್ಲಿ ಷೆಡ್ಯೂಲ್ ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ಡಿಕ್ರಿಗೆ ಪೂರ್ವದಲ್ಲಿ ಜಪ್ತಿ ಮಾಡಿ ಆದೇಶಿಸಲಾಗಿತ್ತು. ಈ ಆದೇಶದಲ್ಲಿ ಪತಿವಾದಿಯು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯದಿಂದ ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ.25,94,964-00 ಗಳನ್ನು ವಾದಿ ಸಂಘದಲ್ಲಿ ಅಮಾನತ್ ಖಾತೆಗೆ ದಿನಾಂಕ 2.9.2004ರ ಒಳಗಾಗಿ ಪಾವತಿ ಮಾಡಿ, ದಾಖಲಾತಿ ಒದಗಿಸಲು ಆದೇಶಿಸಲಾಗಿತ್ತು. ಸದರಿ ಆದೇಶದಲ್ಲಿ ಈ ಮೇಲಿನಂತೆ ನಗದು ಭದ್ರತೆ ನೀಡಲು ವಿಫಲರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ಈ ಅಟ್ಯಾಚ್‌ಮೆಂಟ್ ಆದೇಶವನ್ನು ಸ್ಥಿರೀಕರಿಸಲಾಗುವುದು ಎಂದು ಆದೇಶಿಸಿ ನೋಟೀಸ್ ನೀಡಲಾಗಿದೆ.

**ಷೆಡ್ಯೂಲ್ ಆಸ್ತಿಯ ವಿವರ**

| ಕ್ರ. ಸಂ. | ಜಿಲ್ಲೆ | ತಾಲ್ಲೂಕ್ | ಹೋಬಳಿ | ಗ್ರಾಮ | ಸರ್ವೆ ನಂ. | ತರಹೆ | ಎ.ಗುಂ. | ಆಕಾರ |
|---|---|---|---|---|---|---|---|---|
| 1 | ಶಿವಮೊಗ್ಗ | ಶಿವಮೊಗ್ಗ | ಸಿರಿಗೆ | ಶೆಟ್ಟಿಕೆರೆ | 49 | ಭಾಗಾಯ್ತು | 0-37<br>1-00 | 3-00<br>2-00 |
| 2 | ” | ” | ” | ” | 50ಪಿ1 | ಭಾಗಾಯ್ತು | 0-34 | 2-00 |
| 3 | ” | ” | ” | ” | 50ಪಿ1 | ಭಾಗಾಯ್ತು ತೆಂಗು | 0-14 | 1-00 |
| 4 | ” | ” | ” | ” | 54 | ಭಾಗಾಯ್ತು ಅಡಿಕೆ | 1-28 | 2-00 |
| 5 | ” | ” | ” | ” | 55 | ತರಿಅಡಿಕೆ | 2-10 | 3-00 |
| 6 | ” | ” | ” | ” | 56ಪಿ1 | ಭಾಗಾಯ್ತು ಅಡಿಕೆ | 0-14:8 | 1-00 |
| 7 | ” | ” | ” | ” | 59ಪಿ1 | ತರಿ:ತೆಂಗು | 0-19 | 1-00 |
| 8 | ” | ” | ” | ” | 60 | ಭಾಗಾಯ್ತು ತೆಂಗು | 2-13 | 3-00 |
| 9 | ” | ” | ” | ” | 63 | ತರಿ:ಅಡಿಕೆ | 1-19 | 2-00 |
| 10 | ಶಿವಮೊಗ್ಗ (ವಾರ್ಡ್ ನಂ.2) | ಸಾಗರ | ಕಸಬಾಭೀಮ ಸೇರಿ ಡೋರ್ ನಂ.638 ಕಟ್ಟಡ ನಂ.5 | | 64<br>638 ಅಸೆಸ್‌ಮೆಂಟ್ ನಂ.638 ಎಪಿಎಂಸಿಯಾರ್ಡ್, ಸಾಗರ ಇದರಲ್ಲಿರುವ | ತರಿ:ಅಡಿಕೆ | 1-11 | 2-00 |
| ಈ ಕಟ್ಟಡವು ಶ್ರೀರಾಮ ಟ್ರೇಡರ್ಸ್ ಎಂಬ ಪಾಲುದಾರಿಕೆ ಸಂಸ್ಥೆಯಾಗಿದ್ದು, ಇದರಲ್ಲಿ ಸದರಿ ಶ್ರೀ ಅಶ್ವಿನಿಕುಮಾರ್, ಇವರು ಶೇ.50 ರ ಪಾಲುದಾರಿಕೆಯನ್ನು ಹೊಂದಿರುತ್ತಾರೆ. | | | | | | | | |

ಈ ನೋಟೀಸನ್ನು ಎದುರಿಯವರಿಗೆ ಅಂಚೆನೊಂದಾಯಿತ ಸ್ವೀಕೃತಿ ಮೂಲಕ ಕಳಿಸಿದ್ದು, ಈ ನೋಟೀಸ್ ದಿನಾಂಕ 12.8.2004 ರಂದು ಜಾರಿಯಾಗಿರುವುದು ಅಂಚೆಸ್ವೀಕೃತಿಯಿಂದ ದೃಢಪಡುತ್ತದೆ.

ಈ ಮೇಲ್ಕಂಡ ಆದೇಶಕ್ಕೆ ಎದುರಿಯವರು ದಿನಾಂಕ 2.9.2004 ರಿಂದ ಅವರ ಪ್ರಮಾಣೀಕೃತ ಅರ್ಜಿಯಲ್ಲಿ ತಕರಾರು ಸಲ್ಲಿಸಿದ್ದು, ಅರ್ಜಿದಾರರು ಅರ್ಜಿಯಲ್ಲಿ ನಮೂದಿಸಿರುವ ಚರ ಮತ್ತು ಸ್ಥಿರಾಸ್ತಿಗಳು ಈಗಾಗಲೇ ಮಾರಾಟವಾಗಿದ್ದು, ಸ್ವತ್ತನ್ನು ಪಡೆದವರು ಸ್ವಾಧೀನದಾರರಾಗಿದ್ದು ಹಾಗೂ ಇನ್ನಿತರ ಉಪಯೋಗದ ಅನುಭವವನ್ನು ಹೊಂದಿರುತ್ತಾರೆ ಎಂದು ತಿಳಿಸಿದ್ದು, ಈ ಷೆಡ್ಯೂಲ್ ಸ್ಥಿರಾಸ್ತಿಯನ್ನು ತೀರ್ಪುಪೂರ್ವ ಜಪ್ತಿ ಮಾಡಲು ಅವಕಾಶವಿರುವುದಿಲ್ಲವೆಂದು ಪ್ರಮಾಣೀಕರಿಸಿ ಅರ್ಜಿ ಸಲ್ಲಿಸಿರುತ್ತಾರೆ. ಹಾಗೂ ಅರ್ಜಿಯೊಂದಿಗೆ ಮಾರಾಟದ ದಾಖಲಾತಿ ಸಲ್ಲಿಸಿದ್ದು, ಅವುಗಳ ಪ್ರಕಾರ ದಿನಾಂಕ 13.4.2004 ರಂದು ಸ್ಥಿರ ಸ್ವತ್ತಿನ ಶುದ್ಧ ಕ್ರಯಪತ್ರವಿದ್ದು ಉಪನೊಂದಣಾಧಿಕಾರಿ, ಶಿವಮೊಗ್ಗರವರ ಕಛೇರಿಯಲ್ಲಿ ದಿನಾಂಕ 15.4.2004 ರಂದು ನೊಂದಣಿ ಶುಲ್ಕ ಪಾವತಿಸಿ, ನೊಂದಣಿಯಾಗಿರುತ್ತದೆ.

ಎದುರು ಅರ್ಜಿದಾರರ ಈ ತಕರಾರು ಅರ್ಜಿಯ ವಿಷಯವನ್ನು ಅರ್ಜಿದಾರರ ಸಂಘದ ಕಾರ್ಯದರ್ಶಿಯವರಿಗೆ ಪತ್ರ ನಂ.ಡಿಆರ್‌ಎಸ್: ಡಿಡಿಎಸ್:6:04-05:ದಿನಾಂಕ:14.9.2004 ರಲ್ಲಿ ತಿಳಿಸಿ, ಸ್ಥಿರಾಸ್ತಿಯ ಮ್ಯುಟೇಶನ್, ಖಾತೆಯ ದೃಢೀಕೃತ ಪ್ರತಿ ಹಾಗೂ 13 ವರ್ಷದ ಋಣಭಾರ ರಾಹಿತ್ಯದ ದೃಢೀಕೃತ ಪ್ರತಿ ಸಲ್ಲಿಸಲು ತಿಳಿಸಿ, ಸ್ಥಿರಾಸ್ತಿ ಪರಭಾರೆ ಮಾಡಲಾಗಿರುವ ಬಗ್ಗೆ ಸ್ಪಷ್ಟ ದಾಖಲಾತಿ ಮತ್ತು ಮಾಹಿತಿಯನ್ನು ಕೂಡಲೇ ಒದಗಿಸುವಂತೆ ಸೂಚಿಸಲಾಗಿದೆ.

ಅರ್ಜಿದಾರರು ಈ ಮಾಹಿತಿ ಒದಗಿಸದೇ ಇರುವುದರಿಂದ ಅವರಿಗೆ ಇನ್ನೊಂದು ಅವಕಾಶ ಕಲ್ಪಿಸಿ, ಈ ಕಚೇರಿ ಪತ್ರ ಸಂ.ಡಿಆರ್‌ಎಸ್: ಡಿಡಿಎಸ್:6:04-05:ದಿನಾಂಕ: 27.10.2004 ರಲ್ಲಿ ಕಾಯ್ದೆ ಕಲಂ 103ರ ಆದೇಶ ಸ್ವೀಕರಿಸುವ ಸಂಬಂಧ ಕೇಳಲಾಗಿರುವ ದಾಖಲಾತಿಗಳನ್ನು ಒಂದು ವಾರ ಅವಕಾಶ ಕಲ್ಪಿಸಿದ್ದು, ಈ ದಾಖಲಾತಿ ಒದಗಿಸಲು ತಪ್ಪಿದಲ್ಲಿ ದಿನಾಂಕ 2.8.2004ರ ಆದೇಶವನ್ನು ರದ್ದುಪಡಿಸಿ, ಅವರ ವೈಯಕ್ತಿಕ ಜವಾಬ್ದಾರಿ ಮೇರೆಗೆ ಅರ್ಜಿಯನ್ನು ವಾಪಸ್ ಮಾಡಲಾಗುವುದು ಎಂದು ತಿಳಿಸಲಾಗಿದೆ. ಅರ್ಜಿದಾರರಿಗೆ ಹೀಗೆ ಒಟ್ಟು ದಿನಾಂಕ 14.9.2004 ರಿಂದ 10.11.2004 ರವರೆಗೆ ಅವಕಾಶ ಕಲ್ಪಿಸಿದ್ದರೂ ದಾಖಲಾತಿಗಳನ್ನು ಒದಗಿಸಿರುವುದಿಲ್ಲ.

ಅರ್ಜಿದಾರರಿಗೆ ಸಾಕಷ್ಟು ಅವಕಾಶ ಕಲ್ಪಿಸಿದಾಗ್ಯೂ, ಈ ನ್ಯಾಯಾಲಯದಿಂದ ಕೇಳಲಾದ ದಾಖಲಾತಿ ಒದಗಿಸಿರುವುದಿಲ್ಲದ ಕಾರಣ ಹಾಗೂ ಎದುರಿಯವರ ಇನ್ನಾವುದೇ ಸ್ಥಿರಾಸ್ತಿಯನ್ನು ಜಪ್ತಿಗಾಗಿ ಕೋರಿರುವುದಿಲ್ಲದ್ದರಿಂದ

ಈ ಮೇಲ್ಕಂಡ ಕಾರಣಗಳಿಂದ ಕಾಯ್ದೆ ಕಲಂ 103ರನ್ವಯ ಅರ್ಜಿದಾರರು ಸಲ್ಲಿಸಿರುವ ಅರ್ಜಿಯ ಸಂಬಂಧ ದಿನಾಂಕ 2.8.2004 ರಂದು ಹೊರಡಿಸಲಾದ ಆದೇಶದಲ್ಲಿಯ ಸ್ಥಿರಾಸ್ತಿ ಜಪ್ತಿ ಸ್ಥಿರೀಕರಣ ಸಂಬಂಧ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಈ ಪ್ರಕರಣದಲ್ಲಿಯ ಎದುರು ಅರ್ಜಿದಾರರ ತಕರಾರು ಆಧಾರಿತವಾಗಿ ಹಾಗೂ ಅರ್ಜಿದಾರರು ಅವಶ್ಯಕವಾದ ದಾಖಲಾತಿ ಒದಗಿಸಲು ವಿಫಲರಾದ ಪ್ರಯುಕ್ತ, ಅರ್ಜಿದಾರರ ವೈಯಕ್ತಿಕ ಜವಾಬ್ದಾರಿಯ ಮೇರೆಗೆ, ಈ ನ್ಯಾಯಾಲಯದಿಂದ ದಿನಾಂಕ:2.8.2004 ರಂದು ಸ್ಥಿರಾಸ್ತಿಯನ್ನು ತೀರ್ಪಿಗೆ ಮುನ್ನ ಜಪ್ತಿಗೆ ಆದೇಶಿಸಿ ನೀಡಲಾಗಿರುವ ಆದೇಶವನ್ನು ರದ್ದುಪಡಿಸಿದೆ. ಹಾಗೂ ಅರ್ಜಿದಾರರ ಕಲಂ 103ರಲ್ಲಿನ ಅರ್ಜಿಯನ್ನು ವಜಾ ಮಾಡಿ, ಹಿಂದಿರುಗಿಸಿದೆ.

ಈ ಆದೇಶವನ್ನು ದಿನಾಂಕ: 10ನೇ ನವೆಂಬರ್ 2004 ರಂದು ನನ್ನ ಸ್ವಸಹಿ ಹಾಗೂ ನ್ಯಾಯಾಲಯದ ಮುದ್ರೆಯೊಂದಿಗೆ ಹೊರಡಿಸಿದೆ.

ಪಿ.ಆರ್. 1639 ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ

**ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಕೇಂದ್ರ ಕಛೇರಿ, ಬೆಂಗಳೂರು-52 ಇವರ ನಡವಳಿಕೆಗಳು**

**ವಿಷಯ:** ನ್ಯಾಷನಲ್ ಕೋ-ಆಪರೇಟಿವ್ ಟ್ರಾನ್ಸ್‌ಪೋರ್ಟ್ ಕಾರ್ಪೊರೇಷನ್ ನಿ. ಬೆಂಗಳೂರು ಈ ಸಂಘದ ಸಮಾಪನಾಧಿಕಾರಿಗಳ ಬದಲಾವಣೆ ಬಗ್ಗೆ.

**ಉಲ್ಲೇಖ:**
1. ಈ ಕಛೇರಿಯ ಇದೇ ಕ್ರಮಾಂಕದ ಸಮಾಪನಾದೇಶ ದಿನಾಂಕ: 7.10.1986.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಒಂದನೇ ವಲಯ, ಬೆಂಗಳೂರು ಇವರ ಪತ್ರ ಸಂ.ಎಆರ್ ಬಿ-44/ಸಮಾಪನೆ/04-05 ದಿ.13.9.2004.

**ಪೀಠಿಕೆ:**

ನ್ಯಾಷನಲ್ ಕೋ-ಆಪರೇಟಿವ್ ಟೂರಿಸ್ಟ್ ಅಂಡ್ ಟ್ರಾನ್ಸ್‌ಪೋರ್ಟ್ ಕಾರ್ಪೊರೇಷನ್ ಲಿ. ಬೆಂಗಳೂರು ಈ ಸಂಘದ ಆರ್ಥಿಕ ಸ್ಥಿತಿಗತಿಗಳನ್ನು ಮತ್ತು ಅವ್ಯವಹಾರಗಳನ್ನು ಗಮನಿಸಿ ಸಂಘವನ್ನು ಸಮಾಪನೆಗೊಳಿಸಿ ಉಲ್ಲೇಖ (1)ರ ಆದೇಶದಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವೃತ್ತ, ಬೆಂಗಳೂರು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಉಲ್ಲೇಖ (2)ರ ಪತ್ರದಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಒಂದನೇ ವಲಯರವರು ಮನವಿಯನ್ನು ಸಲ್ಲಿಸುತ್ತಾ ಸದರಿ ಸಂಘಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಪರಿಶೀಲಿಸಲಾಗಿ ಈ ಸಂಘದ 43 ಅಮಲ್ಜಾರಿ ಪ್ರಕರಣಗಳು ಮಾರಾಟಾಧಿಕಾರಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, 2ನೇ ವಲಯ ಬೆಂಗಳೂರು ಇದರಲ್ಲಿ ಬಾಕಿ ಇರುವುದರಿಂದ ಹಾಗೂ ಸದರಿ ಸಂಘದ ಕಾರ್ಯವ್ಯಾಪ್ತಿಯು ಸಹಕಾರ ಸಂಘಗಳ ಸಹಾಯಕ ನಿಬಂಧಕರು, 2ನೇ ವಲಯರವರ ಅಧಿಕಾರ ವ್ಯಾಪ್ತಿಯಲ್ಲಿರುವುದರಿಂದ ಹಾಲಿ ಇರುವ ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಬೆಂಗಳೂರು ರವರಿಗೆ ಬದಲಾಗಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, 2ನೇ ವಲಯ ಬೆಂಗಳೂರು ಇವರನ್ನು ಸಮಾಪನಾಧಿಕಾರಿಯನ್ನಾಗಿ ಬದಲಾಯಿಸಲು ಕೋರಿರುತ್ತಾರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಬೆಂಗಳೂರು ಇವರ ಕೋರಿಕೆಯ ಮೇರೆಗೆ ಬದಲಾವಣಾ ಆದೇಶ ಹೊರಡಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡ ಆದೇಶ.

**ಆದೇಶ ಸಂ.ಎಲ್‌ಕ್ಯೂಡಿ.2.1978-79, ದಿನಾಂಕ: 10ನೇ ನವೆಂಬರ್ 2004**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ.73ರ ರೀತ್ಯಾ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ನ್ಯಾಷನಲ್ ಕೋ-ಆಪರೇಟಿವ್ ಟೂರಿಸ್ಟ್ ಅಂಡ್ ಟ್ರಾನ್ಸ್‌ಪೋರ್ಟ್ ಕಾರ್ಪೊರೇಷನ್ ಲಿ. ಬೆಂಗಳೂರು ಈ ಸಂಘದ ಸಮಾಪನಾಧಿಕಾರಿಯನ್ನಾಗಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, 2ನೇ ವಲಯ, ಬೆಂಗಳೂರು ಇವರನ್ನು ಸಮಾಪನಾಧಿಕಾರಿಯನ್ನಾಗಿ ಹೆಚ್ಚುವರಿ ಪ್ರಭಾರ ಆಧಾರದ ಮೇಲೆ ನೇಮಕಾತಿ ಮಾಡಲಾಗಿದೆ.

ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು ವಹಿಸಿಕೊಂಡು ಪ್ರಭಾರ ಪಟ್ಟಿಯ ಪ್ರತಿಯನ್ನು ಒಂದು ವಾರದೊಳಗಾಗಿ ಈ ಕಛೇರಿಗೆ ಸಲ್ಲಿಸತಕ್ಕದ್ದು. ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ.74 ಮತ್ತು ನಿಯಮ 33ರ ಪ್ರಕಾರ ಸಮಾಪನಾಧಿಕಾರಿ ಹುದ್ದೆಯ ಕರ್ತವ್ಯವನ್ನು ನಿರ್ವಹಿಸುವುದು. ಸಂಘದ ಇತ್ತೀಚಿನ ಲೆಕ್ಕಪರಿಶೋಧನಾ ವರದಿಯ ಆಧಾರದ ಮೇಲೆ ಆದ್ಯತಾ ಪಟ್ಟಿಯನ್ನು ತಯಾರಿಸಿ ಈ ಕಛೇರಿಯ ಅನುಮೋದನೆ ಪಡೆದು ಆಸ್ತಿ-ಜವಾಬ್ದಾರಿಗಳನ್ನು ತ್ವರಿತವಾಗಿ ವಿಲೇವಾರಿ ಮಾಡಿ ಸಂಘದ ನೊಂದಣಿ ಕ್ರಮಾಂಕವನ್ನು ರದ್ದುಗೊಳಿಸಲು ಸೂಕ್ತ ಕ್ರಮವಿಡತಕ್ಕದ್ದು.

ಈ ಆದೇಶವನ್ನು ಸ್ವಸಹಿ ಹಾಗೂ ಈ ಕಛೇರಿಯ ಮುದ್ರೆಯೊಂದಿಗೆ ಈ ದಿನ ದಿನಾಂಕ 10.11.2004ರಂದು ಹೊರಡಿಸಲಾಗಿದೆ.

ಬಿ. ನಾಗರಾಜು

ಪಿ.ಆರ್. 1640 ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ)

**ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಕೇಂದ್ರ ಕಛೇರಿ, ಬೆಂಗಳೂರು ಇವರ ನಡವಳಿಕೆಗಳು**

**ವಿಷಯ:** ಸಮಾಪನೆಯಲ್ಲಿರುವ ಒಳನಾಡು ಮೀನುಗಾರಿಕಾ ಸಹಕಾರ ಸಂಘ ನಿ. ಹಾವೇರಿ, ಇದರ ನೊಂದಣಿ ಕ್ರಮಾಂಕ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿಯ ಆದೇಶ ಸಂ.ಎಸ್‌ಎಲ್‌ಕ್ಯೂ.10:79-80 ದಿನಾಂಕ: 2.5.1980.
2. ಸಹಕಾರ ಸಂಘಗಳ ಲೆಕ್ಕಪರಿಶೋಧಕರು, ಸ.ಸಂ.ರಾಣೇಬೆನ್ನೂರು, ಇವರ ಲೆಕ್ಕಪರಿಶೋಧನಾ ವರದಿ ದಿನಾಂಕ: 17.12.1998.
3. ಸಮಾಪನಾಧಿಕಾರಿಗಳು, ಇವರ ಪತ್ರ ಸಂ.ತಾಪಸ.ಸಹಕಾರ ಎಲ್‌ಕ್ಯೂಡಿ. ಸಿಆರ್.52.87-88 ದಿನಾಂಕ: 2.10.1998.
4. ಸಹಕಾರ ಸಂಘಗಳ ಉಪ ನಿಬಂಧಕರು, ಹಾವೇರಿ ಜಿಲ್ಲೆ, ಇವರ ಪತ್ರ ಸಂ.ಡಿಆರ್‌ಎಚ್:ಎಲ್‌ಕ್ಯೂಡಿ:ಸಿಆರ್:159: 2001-02, ದಿನಾಂಕ:29.9.2004.

**ಪೀಠಿಕೆ:**

ಒಳನಾಡು ಮೀನುಗಾರಿಕಾ ಸಹಕಾರ ಸಂಘ ನಿ. ಹಾವೇರಿ, ಈ ಸಹಕಾರ ಸಂಘವು ನೊಂದಣಿ ಕ್ರ.1959.ಆರ್ ಸಿಎಸ್.1962-63 ದಿನಾಂಕ: 15.1.1963ರಂದು ನೊಂದಾಯಿಸಲ್ಪಟ್ಟಿರುತ್ತದೆ. ಸಂಘದ ಆಡಳಿತ ವ್ಯಾಪ್ತಿಯು ಹಾವೇರಿ ಶಿರಹಟ್ಟಿ, ಶಿಗ್ಗಾಂವ, ಹಾನಗಲ್, ಹಿರೇಕೆರೂರು ರಾಣೇ ಬೆನ್ನೂರು ಮತ್ತು ಬ್ಯಾಡಗಿ ಹೀಗೆ 7 ತಾಲ್ಲೂಕುಗಳಿಗೆ ಸೀಮಿತವಾಗಿರುತ್ತದೆ.

ಸದರಿ ಸಂಘದ ವ್ಯವಹಾರಗಳು ದೀರ್ಘಕಾಲದಿಂದ ಸ್ಥಗಿತಗೊಂಡಿದ್ದರಿಂದ ಹಾಗೂ ಸಂಘದ ಆಡಳಿತ ಮಂಡಳಿಗಾಗಲೀ ಸದಸ್ಯರಿಗಾಗಲೀ ಸಂಘವನ್ನು ನಡೆಸಿಕೊಂಡು ಹೋಗಲು ಆಸಕ್ತಿ ಇಲ್ಲದಿರುವ ಕಾರಣ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2)(ಬಿ)ರನ್ವಯ ಈ ಆದೇಶ ಸಂಖ್ಯೆ:ಎಸ್‌ಎಲ್‌ಕ್ಯೂ:10.79-80, ದಿನಾಂಕ: 2.5.1980ರಲ್ಲಿ ಸಮಾಪನೆಗೊಳಿಸಿ, ಸಹಕಾರ ವಿಸ್ತರಣಾಧಿಕಾರಿ ಹಾವೇರಿ ಇವರನ್ನು ಸಮಾಪನಾಧಿಕಾರಿಯಾಗಿ ನೇಮಿಸಲಾಗಿತ್ತು.

ಉಲ್ಲೇಖ(3)ರಲ್ಲಿ ಸಮಾಪನಾಧಿಕಾರಿಗಳು ಈ ಕಛೇರಿಯ ಪತ್ರ ಸಂ:ಎಸ್‌ಎಲ್‌ಕ್ಯೂ:10.79-80 ದಿನಾಂಕ: 5.8.1988ರನ್ವಯ ಕೆಲವೊಂದು ಬಾಬ್ತುಗಳನ್ನು ಅನಿವಾರ್ಯ ಕಾರಣಗಳಿಂದ ಸೂಟ ಬಿಡಲು ಅನುಮತಿ ನೀಡಿದ್ದರಿಂದ ಅವುಗಳನ್ನು ಜಮಾ ಖರ್ಚು ಮಾಡಿಕೊಳ್ಳಲಾಗಿದೆ. ಮತ್ತು ಸರಕಾರಕ್ಕೆ ಭರಣ ಮಾಡಬೇಕಾದ ಷೇರು ಹಣ ಭರಣ ಮಾಡಲಾಗಿದೆ. ಸಂಘದಲ್ಲಿ ಈಗ ಕೊಡತಕ್ಕ ಹಾಗೂ ಬರತಕ್ಕ ಬಾಬ್ತುಗಳು ಏನೂ ಇರುವುದಿಲ್ಲ. ಅಥಾವೆ ಶೂನ್ಯವಾಗಿದೆ ಎಂದು ವರದಿ ಮಾಡಿರುತ್ತಾರೆ.

ಉಲ್ಲೇಖ (2)ರಲ್ಲಿ ಸಹಕಾರ ಸಂಘಗಳ ಲೆಕ್ಕಪರಿಶೋಧಕರು, ಸದರಿ ಸಂಘದ ಹಣಕಾಸು ತಃಖ್ತೆ ಆಸ್ತಿ ಜವಾಬ್ದಾರಿ ತಃಖ್ತೆ ಏನೂ ಇರುವುದಿಲ್ಲ ಎಂದು ತಿಳಿಸುತ್ತಾ ಸಂಘದ ನೊಂದಣಿ ರದ್ದು ಮಾಡಬಹುದೆಂದು ತಿಳಿಸಿರುತ್ತಾರೆ.

ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಸಂಘವನ್ನು ಯಥಾ ಸ್ಥಿತಿಯಲ್ಲಿ ಮುಂದುವರೆಸುವುದರಿಂದ ಸಾರ್ವಜನಿಕರಿಗಾಗಲೀ ಅಥವಾ ಸದಸ್ಯರಿಗಾಗಲೀ ಯಾವುದೇ ಪ್ರಯೋಜನಕಾರಿಯಾಗಿಲ್ಲವೆಂದು ಮನಗಂಡು ಸದರಿ ಸಮಾಪನಾ ಸಂಘದ ನೊಂದಣಿಯನ್ನು ರದ್ದುಗೊಳಿಸುವುದು ಸಮಂಜಸವೆಂದು ಪರಿಭಾವಿಸಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಎಲ್‌ಕ್ಯೂ:10.79-80, ದಿನಾಂಕ: 16ನೇ ನವೆಂಬರ್ 2004**

ಪೀಠಿಕೆಯಲ್ಲಿ ಪ್ರತಿವಾದಿಸಲಾದ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಬಿ. ನಾಗರಾಜ ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ), ಕೇಂದ್ರ ಕಛೇರಿ, ಬೆಂಗಳೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 75 ರಡಿ ನನಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಒಳನಾಡು ಮೀನುಗಾರಿಕಾ ಸಹಕಾರ ಸಂಘ ನಿ. ಹಾವೇರಿ, ಇದರ ನೊಂದಣಿ ಸಂ.1957:ಆರ್‌ಸಿಎಸ್:1962-63 ದಿನಾಂಕ: 15.1.1963ನ್ನು ರದ್ದುಪಡಿಸಿರುತ್ತೇನೆ. ಈ ನೊಂದಣಿ ರದ್ದತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಚಟುವಟಿಕೆಗಳು ಸಂಪೂರ್ಣವಾಗಿ ನಿಂತುಹೋಗಿರುತ್ತದೆಂದು, ಸಂಘವು ಅಸ್ತಿತ್ವದಲ್ಲಿಲ್ಲದೇ ವಿಸರ್ಜಿತವಾಗಲಿದೆಯೆಂದು ಪರಿಗಣಿಸತಕ್ಕದ್ದು.

ಈ ಆದೇಶವು ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ಈ ದಿನ ದಿನಾಂಕ: 16.11.2004 ರಂದು ಹೊರಡಿಸಲಾಗಿದೆ.

ಬಿ. ನಾಗರಾಜು

ಪಿ.ಆರ್. 1641 ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ)

**ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಕೇಂದ್ರ ಕಛೇರಿ, ಬೆಂಗಳೂರು ಇವರ ನಡವಳಿಕೆಗಳು**

**ವಿಷಯ:** ಸಮಾಪನೆಗೊಂಡ ಧಾರವಾಡ ಜಿಲ್ಲಾ ಸಂಯುಕ್ತ ಬೇಸಾಯ ಸಹಕಾರ ಸಂಘ ನಿ, ಹಾವೇರಿ, ಇದರ ನೊಂದಣಿ ಕ್ರಮಾಂಕ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿಯ ಸಮಾಪನಾದೇಶ ಸಂ.ಡಿಎಲ್‌ಎಸ್:ಎಲ್‌ಕ್ಯೂಡಿ:10.89-80 ದಿನಾಂಕ: 27.3.1993.
2. ಸಹಕಾರ ಸಂಘಗಳ ಉಪ ನಿಬಂಧಕರು, ಹಾವೇರಿ ಜಿಲ್ಲೆ, ಇವರ ಪತ್ರ ಸಂ.ಡಿಆರ್‌ಎಚ್:ಎಲ್‌ಕ್ಯೂಡಿ:ಸಿಆರ್-42: 2001-02, ದಿನಾಂಕ: 14.3.2002, 31.5.2002 ಹಾಗೂ 25.9.2004
3. ಸಮಾಪನಾಧಿಕಾರಿಗಳು ನಡೆಸಿದ ಅಂತಿಮ ಮಹಾ ಸಭೆ ದಿನಾಂಕ: 18.1.2002ರ ನಡವಳಿಕೆಗಳು.

**ಪೀಠಿಕೆ:**

ಧಾರವಾಡ ಜಿಲ್ಲಾ ಸಂಯುಕ್ತ ಬೇಸಾಯ ಸಹಕಾರ ಸಂಘ ನಿ. ಹಾವೇರಿ ಈ ಸಹಕಾರ ಸಂಘವು ನೊಂದಣಿ ಸಂ.ಡಿಆರ್‌ಡಿ.1.ಆರ್‌ಸಿಎಸ್.161:67 ದಿನಾಂಕ:30.3.1967 ರಂದು ನೊಂದಾಯಿಸಲ್ಪಟ್ಟಿರುತ್ತದೆ. ಸಂಘದ ಕಾರ್ಯ ವ್ಯಾಪ್ತಿಯು ಧಾರವಾಡ ಜಿಲ್ಲೆಗೆ ಸೀಮಿತವಾಗಿರುತ್ತದೆ.

ಸದರಿ ಸಂಘವು ದಿನಾಂಕ: 30.6.1987ರವರೆಗೆ ಲೆಕ್ಕ ತಪಾಸಣೆ ಮಾಡಲ್ಪಟ್ಟಿದ್ದು ಅನೇಕ ವರ್ಷಗಳಿಂದ "ಡಿ" ವರ್ಗದಲ್ಲಿರುತ್ತದೆ. ಸಂಘದ ವ್ಯವಹಾರಗಳು 1974 ರಿಂದ ಸ್ಥಗಿತಗೊಂಡಿದ್ದು ಮತ್ತು ಪೋಟಿ ನಿಯಮಗಳನ್ವಯ ತನ್ನ ಉದ್ದೇಶಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ವಿಫಲಗೊಂಡಿದ್ದರಿಂದ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2)(ಬಿ) ರನ್ವಯ ಈ ಕಛೇರಿಯ ಆದೇಶ ಸಂಖ್ಯೆ:ಡಿಎಲ್‌ಎಸ್:ಎಲ್‌ಕ್ಯೂಡಿ:10.89-90 ದಿನಾಂಕ: 27.3.1993ರಲ್ಲಿ ಸಮಾಪನೆಗೊಳಿಸಿ, ಸಹಕಾರ ವಿಸ್ತರಣಾಧಿಕಾರಿ 1, ಹಾವೇರಿ ಇವರನ್ನು ಸಮಾಪನಾಧಿಕಾರಿಯಾಗಿ ನೇಮಿಸಲಾಗಿತ್ತು.

ಉಲ್ಲೇಖ (2)ರಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು, ಹಾವೇರಿ ಜಿಲ್ಲೆ, ಇವರು ಸಮಾಪನೆಯಲ್ಲಿರುವ ಧಾರವಾಡ ಜಿಲ್ಲಾ ಸಂಯುಕ್ತ ಬೇಸಾಯ ಸಹಕಾರ ಸಂಘ ನಿ. ಹಾವೇರಿ, ಇದಕ್ಕೆ ಸರ್ಕಾರದಿಂದ ಮಂಜೂರಾಗಿದ್ದ ರೂ.8900 ಷೇರು ಬಂಡವಾಳ ಹಾಗೂ ಸಾಲ ರೂ.8530-95ಗಳನ್ನು ಸರ್ಕಾರವು ಆದೇಶ ಸಂ.ಸಿಎಂಡಬ್ಲ್ಯೂ 6:ಸಿಆರ್‌ಸಿ:2000, ಬೆಂಗಳೂರು ದಿನಾಂಕ: 24.6.2000ರಲ್ಲಿ ಮನ್ನಾ ಮಾಡಿ ಆದೇಶ ಹೊರಡಿಸಿರುತ್ತದೆ. ಇದನ್ನು ಸರ್ಕಾರಕ್ಕೆ ಮರುಪಾವತಿಸಲಾಯಿತೆಂದು ಜಮಾ ಖರ್ಚು ಮಾಡಿಕೊಳ್ಳಲಾಗಿದೆ ಎಂದು ತಿಳಿಸಿರುತ್ತಾರೆ.

ಸಂಘದಲ್ಲಿ ಬರತಕ್ಕ ಬಾಬ್ತುಗಳ ಬಗ್ಗೆ ಅವಶ್ಯಕ ಸೂಕ್ತ ದಾಖಲೆಗಳಿಲ್ಲದೆ, ಕ್ರೋಢೀಕರಣವಾಗದೇ ಇರುವುದರಿಂದ ಹಾಗೂ ಸಂಘವು ಕೂಡಿಬಿದ್ದ ಹಾನಿಯಲ್ಲಿರುವುದರಿಂದ ಕೊಡತಕ್ಕ ಬಾಬ್ತುಗಳನ್ನು ವಿಲೇವಾರಿ ಮಾಡುವುದು ಸಾಧ್ಯವಿಲ್ಲದ ಕಾರಣ ಹೊಂದಾಣಿಕೆ ಮೂಲಕ ಜಮಾ ಖರ್ಚು ಮಾಡಿಕೊಂಡು ಅಡಾವೆ ಶೂನ್ಯಗೊಳಿಸಿ ಸಮಾಪನಾಧಿಕಾರಿಗಳು ಠರಾವು ಪಾಸು ಮಾಡಿದ್ದಾರೆ.

ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಸಂಘವನ್ನು ಯಥಾಸ್ಥಿತಿಯಲ್ಲಿ ಮುಂದುವರೆಸುವುದರಿಂದ ಸಾರ್ವಜನಿಕರಿಗಾಗಲೀ ಅಥವಾ ಸದಸ್ಯರಿಗಾಗಲೀ ಯಾವುದೇ ಪ್ರಯೋಜನಕಾರಿಯಾಗಿಲ್ಲವೆಂದು ಮನಗಂಡು ಸದರಿ ಸಮಾಪನಾ ಸಂಘದ ನೊಂದಣಿಯನ್ನು ರದ್ದುಗೊಳಿಸುವುದು ಸಮಂಜಸವೆಂದು ಪರಿಭಾವಿಸಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಡಿಎಲ್‌ಎಸ್:ಎಲ್‌ಕ್ಯೂಡಿ:10.89-90, ದಿನಾಂಕ: 16ನೇ ನವೆಂಬರ್ 2004**

ಪೀಠಿಕೆಯಲ್ಲಿ ಪ್ರತಿಪಾದಿಸಲಾದ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಬಿ. ನಾಗರಾಜ, ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ), ಕೇಂದ್ರ ಕಛೇರಿ, ಬೆಂಗಳೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 75ರಡಿ ನನಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಧಾರವಾಡ ಜಿಲ್ಲಾ ಸಂಯುಕ್ತ ಬೇಸಾಯ ಸಹಕಾರ ಸಂಘ ನಿ. ಹಾವೇರಿ, ಇದರ ನೊಂದಣಿ ಸಂ.ಡಿಆರ್‌ಡಿ:1: ಆರ್‌ಸಿಎಸ್:161:67 ದಿನಾಂಕ: 30.3.1967ನ್ನು ರದ್ದು ಪಡಿಸಿರುತ್ತೇನೆ. ಈ ನೊಂದಣಿ ರದ್ದತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಚಟುವಟಿಕೆಗಳು ಸಂಪೂರ್ಣವಾಗಿ ನಿಂತುಹೋಗಿರುತ್ತದೆಂದು, ಸಂಘವು ಅಸ್ತಿತ್ವದಲ್ಲಿಲ್ಲದೇ ವಿಸರ್ಜಿತವಾಗಿದೆಯೆಂದು ಪರಿಗಣಿಸತಕ್ಕದ್ದು.

ಈ ಆದೇಶವು ಸ್ವಸಹಿ ಹಾಗೂ ಕಚೇರಿಯ ಮುದ್ರೆಯೊಂದಿಗೆ ಈ ದಿನ ದಿನಾಂಕ: 16.11.2004ರಂದು ಹೊರಡಿಸಲಾಗಿದೆ.

ಬಿ. ನಾಗರಾಜು

ಪಿ.ಆರ್. 1642 ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ)

**ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಕೇಂದ್ರ ಕಛೇರಿ, ಬೆಂಗಳೂರು, ಇವರ ನಡವಳಿಕೆಗಳು**

**ವಿಷಯ:** ಸಮಾಪನೆಯಲ್ಲಿರುವ ಐಮಂಗಲ ಖಾದಿ ಮತ್ತು ಗ್ರಾಮೋದ್ಯೋಗ ಸಹಕಾರ ಸಂಘ ನಿ. ಚಿತ್ರದುರ್ಗ ಇದರ ನೊಂದಣಿ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿಯ ಆದೇಶ ಸಂ.ಸಮಾಪನೆ.2.ಇತರೆ.99-2000 ದಿನಾಂಕ: 12.11.1999.
2. ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು, ಇವರ ಪತ್ರ ಸಂ.ಜೆಆರ್‌ಬಿ. ಎಲ್‌ಕ್ಯೂಡಿ.39.ಎಲ್‌ಎಂಸಿ.2003-04, ದಿನಾಂಕ: 4.2.2004.
3. ಸಮಾಪನಾಧಿಕಾರಿಗಳು ದಿನಾಂಕ: 28.11.2003ರಂದು ನಡೆಸಿದ ನಡುವಳಿಕೆಗಳು.

**ಪೀಠಿಕೆ:**

ಐಮಂಗಲ ಖಾದಿ ಮತ್ತು ಗ್ರಾಮೋದ್ಯೋಗ ಸಹಕಾರ ಸಂಘ ನಿ, ಚಿತ್ರದುರ್ಗ ಈ ಸಹಕಾರ ಸಂಘವು ನೊಂದಣಿ ಸಂಖ್ಯೆ.ಎಆರ್‌ಸಿ.839. 65-66 ದಿನಾಂಕ:28.9.1965 ರಂದು ನೊಂದಾಯಿಸಲ್ಪಟ್ಟಿರುತ್ತದೆ. ಸಂಘದ ಆಡಳಿತ ವ್ಯಾಪ್ತಿಯು ಅವಿಭಜಿತ ಚಿತ್ರದುರ್ಗ ಜಿಲ್ಲೆಗೆ ಸೀಮಿತವಾಗಿರುತ್ತದೆ.

ಸದರಿ ಸಂಘದ ವ್ಯವಹಾರಗಳು ಧೀರ್ಘಕಾಲದಿಂದ ಸ್ಥಗಿತಗೊಂಡಿದ್ದರಿಂದ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2)ರನ್ವಯ ಈ ಕಛೇರಿಯ ಆದೇಶ ಸಂಖ್ಯೆ.ಸಮಾಪನೆ.2.ಇತರೆ.99-2000 ದಿನಾಂಕ: 12.11.1999ರಲ್ಲಿ ಸಮಾಪನೆಗೊಳಿಸಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ ಇವರನ್ನು ಹೆಚ್ಚುವರಿ ಪ್ರಭಾರದ ಮೇಲೆ ಸಮಾಪನಾಧಿಕಾರಿಯಾಗಿ ನೇಮಿಸಲಾಗಿತ್ತು.

ಉಲ್ಲೇಖ (2)ರಲ್ಲಿ ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ ಇವರು ಸಮಾಪನೆಯಲ್ಲಿರುವ ಐಮಂಗಲ ಖಾದಿ ಮತ್ತು ಗ್ರಾಮೋದ್ಯೋಗ ಸಹಕಾರ ಸಂಘ ನಿ. ಚಿತ್ರದುರ್ಗ ಸಮಾಪನಾಧಿಕಾರಿಗಳು ಸಂಘದ ಪ್ರಭಾರ ವಹಿಸಿಕೊಂಡಿದ್ದರೂ, ಸಂಘದ ಲೆಕ್ಕ ಪತ್ರಗಳ ಪ್ರಭಾರವನ್ನು ಪಡೆಯುವಲ್ಲಿ ವಿಫಲರಾಗಿರುವ ಕಾರಣ ಸಂಘದ ಲೆಕ್ಕ ಪತ್ರಗಳ ಲಭ್ಯತೆಯ ಬಗ್ಗೆ ಸ್ಥಳೀಯ ದಿನ ಪತ್ರಿಕೆಗಳಲ್ಲಿ ಪ್ರಕಟಣೆಯನ್ನು ಪ್ರಭಾರ ವಹಿಸಿದ್ದಾಗ್ಯೂ ಯಾವುದೇ ಪ್ರತಿಕ್ರಿಯೆ ಬಾರದ ಫಲಿತಾಂಶ ಶೂನ್ಯವಾಗಿರುತ್ತದೆ. ಸಂಘದ 1979-80ನೇ ಸಾಲಿನ ಆಸ್ತಿ ಜವಾಬ್ದಾರಿ ಪತ್ರಕ್ಕೆ ಅನ್ವಯ ಸಂಘದಿಂದ ಸರ್ಕಾರಕ್ಕೆ ಬರಬೇಕಾದ ಬಾಬ್ತುಗಳು ಯಾವುದೂ ಇಲ್ಲದಿರುವುದರಿಂದ ಹಾಗೂ ಸಂಘದ ಲೆಕ್ಕ ಪತ್ರಗಳು ಲಭ್ಯವಾಗಿಲ್ಲದಿರುವುದರಿಂದ, ಸಮಾಪನಾಧಿಕಾರಿಗಳು ತಮ್ಮ ಉಲ್ಲೇಖ(3)ರ ನಡವಳಿಕೆಯಲ್ಲಿ ಸಂಘದ ಆಸ್ತಿ-ಜವಾಬ್ದಾರಿ ತಃಖ್ತೆಯನ್ನು ಹೊಂದಾಣಿಕೆ ಲೆಕ್ಕದ ಮುಖಾಂತರ ಶೂನ್ಯಗೊಳಿಸಿ ಠರಾವು ಪಾಸು ಮಾಡಿದ್ದಾರೆ ಎಂದು ತಿಳಿಸಿರುತ್ತಾರೆ.

ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಸಂಘವನ್ನು ಯಥಾ ಸ್ಥಿತಿಯಲ್ಲಿ ಮುಂದುವರೆಸುವುದರಿಂದ ಸಾರ್ವಜನಿಕರಿಗಾಗಲೀ ಅಥವಾ ಸದಸ್ಯರಿಗಾಗಲೀ ಯಾವುದೇ ಪ್ರಯೋಜನಕಾರಿಯಾಗಿಲ್ಲವೆಂದು ಪರಿಗಣಿಸಿ ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಬೇಕೆಂದು ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ ಇವರು ಶಿಫಾರಸ್ಸು ಮಾಡಿರುತ್ತಾರೆ.

ಈ ಅಂಶಗಳನ್ನು ಪರಿಗಣಿಸಿ ಪರಿಶೀಲಿಸಿ ಸದರಿ ಸಮಾಪನಾ ಸಂಘದ ನೊಂದಣಿಯನ್ನು ರದ್ದುಗೊಳಿಸುವುದು ಸಮಂಜಸವೆಂದು ಪರಿಭಾವಿಸಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಸಮಾಪನೆ:2:ಇತರೆ:99-2000, ದಿನಾಂಕ: 12ನೇ ನವೆಂಬರ್ 2004**

ಪೀಠಿಕೆಯಲ್ಲಿ ಪ್ರತಿವಾದಿಸಲಾದ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಬಿ. ನಾಗರಾಜು, ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ), ಕೇಂದ್ರ ಕಛೇರಿ, ಬೆಂಗಳೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 75 ರಡಿ ನನಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಐಮಂಗಲ ಖಾದಿ ಮತ್ತು ಗ್ರಾಮೋದ್ಯೋಗ ಸಹಕಾರ ಸಂಘ ನಿ. ಚಿತ್ರದುರ್ಗ, ಇದರ ನೊಂದಣಿ ಸಂಖ್ಯೆ: ಎಆರ್‌ಸಿ:839.65-66, ದಿನಾಂಕ 28.9.1965ನ್ನು ರದ್ದುಪಡಿಸಿರುತ್ತೇನೆ. ಇದರಿಂದಾಗಿ ಸಂಘವು ವಿಸರ್ಜನೆಗೊಂಡಿರುತ್ತದೆ. ಈ ಆದೇಶವನ್ನು ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ಈ ದಿನ ದಿನಾಂಕ: 12.11.2004 ರಂದು ಹೊರಡಿಸಲಾಗಿದೆ.

**ಬಿ. ನಾಗರಾಜು**

ಪಿ.ಆರ್. 1643 ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ)

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಎಸ್‌ಡಿಕೆ/217/ಡಿಟಿಸಿಆರ್/2003-2004, ದಿನಾಂಕ: 8ನೇ ನವೆಂಬರ್ 2004**

**ಉಪಸ್ಥಿತರು:** ಎನ್.ಎಂ. ಹುಸೇನ್,
ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ, ಮಂಗಳೂರು.

| **ಫಿರ್ಯಾದುದಾರರು** | **ವಿರುದ್ಧ** | **ಆರೋಪಿಗಳು** |
|---|---|---|
| ಅಬಕಾರಿ ಉಪ ನಿರೀಕ್ಷಕರು, ಸುರತ್ಕಲ್ ಉಪ ವಲಯ, ಸುರತ್ಕಲ್. | | ಅರವಿಂದ ಅಂಚನ್ (ಪ್ರಾಯ 29 ವರ್ಷ) ಬಿನ್: ರುಕ್ಮಯ ಪೂಜಾರಿ, ನಡುಪೇಯ ಕಾವಳ ಮೂಡೂರು ಕಳ್‌ಕಟ್ಟೆ, ಪುಂಜಾಲಕಟ್ಟೆ, ಬಂಟ್ವಾಳ ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 25.3.2004 ರಂದು ದೊರೆತ ಖಚಿತ ವರ್ತಮಾನದ ಮೇರೆಗೆ ಸುರತ್ಕಲ್ ಉಪ ವಲಯದ ಅಬಕಾರಿ ಉಪ ನಿರೀಕ್ಷಕರು ತಮ್ಮ ಸಿಬ್ಬಂದಿಯವರೊಂದಿಗೆ ಮಂಗಳೂರು ತಾಲ್ಲೂಕು ಸುರತ್ಕಲ್ ಪೇಟೆಯ ಸುರತ್ಕಲ್ ಬಜಪೆ ರಸ್ತೆಯ ಕೃಷ್ಣಾಪುರ ಕಾಟಿಪಳ್ಳ ಕ್ರಾಸ್‌ನ ರಸ್ತೆಯ ಎಡಬದಿಯಲ್ಲಿ ಕಾಯುತ್ತಿರುವಾಗ ಸುರತ್ಕಲ್ ಕಡೆಯಿಂದ ಬಜಪೆ ಕಡೆಗೆ ಬರುತ್ತಿದ್ದ ನೀಲಿ ಬಣ್ಣದ ಸ್ಯಾಂಟ್ರೊ ಕಾರನ್ನು ತಡೆದು ನಿಲ್ಲಿಸಿದಾಗ, ಕಾರಿಗೆ ಕಪ್ಪು ಬಣ್ಣದ ಫಿಲ್ಮ್ ಪೇಪರನ್ನು ಗ್ಲಾಸಿಗೆ ಹಾಕಲಾಗಿದ್ದು, ಚಾಲಕನ ಹೆಸರು, ವಿಳಾಸ ವಿಚಾರಿಸಿದಾಗ ತಾನು ಅರವಿಂದ ಅಂಚನ್, ಬಿನ್: ರುಕ್ಮಯ ಪೂಜಾರಿ, ಕಾವಲ ಮುಡ್ಡೂರು, ಕಾವಲಕಟ್ಟೆ ಅಂಚೆ, ಬಂಟ್ವಾಳ ಎಂದು, ಸದರಿ ಕಾರಿನಲ್ಲಿ ಏನಿದೆ ಎಂದು ಪ್ರಶ್ನಿಸಿದಾಗ ಆತನು ಸಮರ್ಪಕವಾದ ಉತ್ತರವನ್ನು ನೀಡದೆ ಇರುವುದರಿಂದ, ಅನುಮಾನದ ಮೇರೆಗೆ ಸದರಿ ಕಾರನ್ನು ಪರಿಶೀಲಿಸಿದಾಗ ಅದರಲ್ಲಿ ರಟ್ಟಿನ ಪೆಟ್ಟಿಗೆಗಳಿರುವುದು ಕಂಡು ಬಂತು, ಕೂಲಂಕುಷವಾಗಿ ಪರಿಶೀಲಿಸಿದಾಗ ಮದ್ಯ ತುಂಬಿದ 15 ರಟ್ಟಿನ ಪೆಟ್ಟಿಗೆಗಳನ್ನು ಹಿಂಬದಿಯಲ್ಲಿಟ್ಟು ಅವುಗಳ ಮೇಲೆ ಕಪ್ಪು ಬಟ್ಟೆ ಮುಚ್ಚಲಾಗಿರುತ್ತದೆ. ಸದರಿ ಮದ್ಯವನ್ನು ಸಾಗಾಣಿಕೆ ಮಾಡಲು ರಹದಾರಿ ಪತ್ರವಿದೆಯೇ ಎಂದು ಪ್ರಶ್ನಿಸಿದಾಗ, ತಾನು ಮಂಗಳೂರಿನಿಂದ ಮೂಡಬಿದ್ರೆ ಕಡೆಗೆ ಹೋಗುತ್ತಿರುವುದಾಗಿ ಮದ್ಯಗಳ ಸಾಗಾಣಿಕೆ ಮಾಡಲು ಯಾವುದೇ ಪರವಾನಿಗೆ ಇಲ್ಲವೆಂದು ತಿಳಿಸಿರುತ್ತಾನೆ. ಸದರಿ ಕಾರನ್ನು ಶೋಧನೆ ಮಾಡಲು ನ್ಯಾಯಾಲಯದಿಂದ ಸರ್ಚ್ ವಾರಂಟ್‌ನ್ನು ಪಡೆಯಲು ಕಾಲಾವಕಾಶ ಇಲ್ಲದ ಕಾರಣ ಪಂಚರನ್ನಾಗಿ ಇಲಾಖಾ ಸಿಬ್ಬಂದಿಯವರನ್ನೇ ಇರಿಸಿಕೊಂಡು ಸರ್ಚ್ ಮೆಮೊವನ್ನು ತಯಾರಿಸಿ ವಾಹನವನ್ನು ಶೋಧಿಸಿದಾಗ ಅದರಲ್ಲಿ ಮೈಸೂರು ಲ್ಯಾನ್ಸರ್ ವಿಸ್ಕಿಯ 180 ಎಂ.ಎಲ್.ನ 48 ಸೀಸೆಗಳಿರುವ 5 ಪೆಟ್ಟಿಗೆ, ಒರಿಜಿನಲ್ ಚಾಯ್ಸ್ ವಿಸ್ಕಿಯ 180 ಎಂ.ಎಲ್.ನ 48 ಸೀಸೆಗಳಿರುವ 5 ಪೆಟ್ಟಿಗೆ ಮತ್ತು ಓಲ್ಡ್ ಮಾಂಕ್ ರಮ್‌ನ 180 ಎಂ.ಎಲ್.ನ 48 ಸೀಸೆಗಳಿರುವ 5 ಪೆಟ್ಟಿಗೆ ಮದ್ಯ, ಒಟು 15 ಪೆಟ್ಟಿಗೆಗಳಿರುವ 129.600 ಲೀಟರ್ ಮದ್ಯವು ಹೊಂದಿರುವುದು ಕಂಡು ಬರುತ್ತದೆ. ಸದರಿ ಮದ್ಯದಿಂದ ತಲಾ 2 ಸೀಸೆಗಳಂತೆ ಒಟ್ಟು 30 ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಕಳುಹಿಸಲು ತೆಗೆದು ಮುಚ್ಚಳಗಳಿಗೆ ಬಿಳಿ ಬಟ್ಟೆ ಮತ್ತು ದಾರದಿಂದ ಕಟ್ಟಿ ಅರಗು ಹಚ್ಚಿ ಇಲಾಖಾ ಸೀಲ್‌ನಿಂದ ಸೀಲ್ ಮಾಡಿರುತ್ತಾರೆ. ಈ ರೀತಿ ಅಕ್ರಮ ಮದ್ಯ ಹೊಂದಿರುವುದು ಹಾಗೂ ಸಾಗಾಣಿಕೆ ಮಾಡಿರುವುದು ಅಪರಾಧವೆಂದು ತಿಳಿಸಿ, ಆರೋಪಿಯನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿರುತ್ತಾರೆ. ಸದರಿ ನೀಲಿ ಬಣ್ಣದ ಸ್ಯಾಂಟ್ರೋ ಕಾರಿನ ನೋಂದಣಿ ಸಂಖ್ಯೆ: ಕೆಎ-19-ಎನ್-3508 ಇದರ ಇಂಜೀನ್ ಸಂಖ್ಯೆ: 047284, ಚಾಸೀಸ್ ಸಂಖ್ಯೆ:047165 ಆಗಿರುತ್ತದೆ. ಆರೋಪಿಯ ವಿರುದ್ಧ ಮೊಕದ್ದಮೆ ಸಂಖ್ಯೆ: 4/2003-04 ದಿನಾಂಕ: 25.3.2004 ರಂತೆ ಮೊಕದ್ದಮೆ ನೋಂದಾಯಿಸಿ ಮಹಜರನ್ನು ಸ್ಥಳದಲ್ಲಿಯೇ ಬರೆದು ಮುಂದಿನ ಸೂಕ್ತ ಕ್ರಮಕ್ಕಾಗಿ ಅಕ್ರಮವಾಗಿ ಸಾಗಿಸುತ್ತಿದ್ದ 15 ಪೆಟ್ಟಿಗೆ ಮದ್ಯವನ್ನು, ಸಾಗಾಣಿಕೆಗೆ ಬಳಸಿದ ಸ್ಯಾಂಟ್ರೋ ಕಾರನ್ನು ವಶಪಡಿಸಿಕೊಂಡು ಈ ಪಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಸುರತ್ಕಲ್ ವಲಯರವರ ತನಿಖೆ ವರದಿ ಸಂಖ್ಯೆ: ಎಸ್‌ಕೆವಿಎಲ್:ಆರ್‌ಸಿಆರ್:14:03-04 ದಿನಾಂಕ: 11.10.04 ರಲ್ಲಿ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮದ್ಯದ ಸ್ಯಾಂಪಲ್‌ಗಳನ್ನು ವಿಶ್ಲೇಷಣೆಗೆ ಕಳುಹಿಸಲಾಗಿದ್ದು, ರಾಸಾಯನಿಕ ವಿಶ್ಲೇಷಕರು, ಮಂಗಳೂರು ರವರ ಪ್ರಮಾಣ ಪತ್ರ ಸಂಖ್ಯೆ: 498/30 ದಿನಾಂಕ: 29.9.2004ರಲ್ಲಿ ಮದ್ಯದ ಮದ್ಯಸಾರ ಪ್ರಮಾಣ 43% ಮತ್ತು 37% ಪತ್ತೆಯಾಗಿರುವುದಾಗಿ ದೃಢೀಕರಣ ಪತ್ರ ನೀಡಿರುವುದರಿಂದ, ಈ ಪ್ರಾಧಿಕಾರ ಆದೇಶ ಸಂಖ್ಯೆ: ಎಸ್‌ಡಿಕೆ:217:ಡಿಟಿಸಿಆರ್:2003-04 ದಿ: 19.10.2004ರಲ್ಲಿ ವಶಪಡಿಸಿಕೊಂಡ 129.600 ಲೀಟರ್ ಮದ್ಯದಲ್ಲಿ ರಾಸಾಯನಿಕ ವಿಶ್ಲೇಷಣೆಗೆ ತೆಗೆದ ಮದ್ಯವನ್ನು ಹೊರತುಪಡಿಸಿ, ಉಳಿದ ಮದ್ಯವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಆದೇಶ ನೀಡಲಾಗಿರುತ್ತದೆ.

ಅಬಕಾರಿ ಉಪ ನಿರೀಕ್ಷಕರು, ಸುರತ್ಕಲ್ ಉಪ ವಲಯರವರು ಸಾರಿಗೆ ಅಧಿಕಾರಿಗಳು ನೀಡಿದ 'ಬಿ' ಅಬ್‌ಸ್ಟ್ರ್ಯಾಕ್ಟ್ ವರದಿಯಲ್ಲಿ ವಶಪಡಿಸಿಕೊಂಡ ಸ್ಯಾಂಟ್ರೋ ಕಾರಿನ ನೋಂದಣಿ ಸಂಖ್ಯೆ: ಕೆಎ-19-ಎನ್-3508 ರ ಆರ್.ಸಿ. ಮಾಲೀಕರಾದ ಶ್ರೀ ಅರವಿಂದ ಅಂಚನ್, ಬಿನ್: ರುಕ್ಮಯ ಪೂಜಾರಿ, ನಡುಪೇಯ ಕಾವಳ ಮುಡ್ಡೂರು, ಕಳ್‌ಕಟ್ಟೆ, ಪುಂಜಾಲ ಕಟ್ಟೆ, ಬಂಟ್ವಾಳ ಎಂದು ನೀಡಿರುತ್ತಾರೆ. 'ಬಿ' ಎಕ್ಸ್‌ಟ್ರ್ಯಾಕ್ಟ್ ವರದಿಯನ್ನು ಆಧರಿಸಿ ಈ ಪ್ರಾಧಿಕಾರದಿಂದ ವಾಹನದ ಆರ್.ಸಿ. ಮಾಲೀಕರಿಗೆ ದಿ:19.10.2004 ರಂದು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಎ) ರಂತೆ ಕಾರಣ ಕೇಳಿ ನೋಟೀಸನ್ನು ನೋಂದಣಿ ಅಂಚೆ ಮೂಲಕ ಕಳುಹಿಸಲಾಗಿದ್ದು, ಅಂಚೆ ಇಲಾಖೆಯವರು ಸದರಿ ಅರ್ಜಿದಾರರಿಗೆ 7 ದಿವಸದವರೆಗೆ ನೋಂದಣಿ ವಿಳಾಸ ಪತ್ರವನ್ನು ನೀಡಲು ಪ್ರಯತ್ನಿಸಿದ್ದು, ಸದರಿ ವ್ಯಕ್ತಿಯು ವಿಳಾಸದಲ್ಲಿ ಇಲ್ಲದಿರುವುದಾಗಿ ಸದ್ರಿ ನೋಟೀಸನ್ನು ಈ ಪ್ರಾಧಿಕಾರಕ್ಕೆ ಹಿಂದಕ್ಕೆ ಕಳುಹಿಸಿರುತ್ತಾರೆ.

ಸದರಿ ಮೊಕದ್ದಮೆಯು ದಾಖಲಾಗಿ ಸುಮಾರು 8 ತಿಂಗಳು ಕಳೆದರೂ ಯಾವುದೇ ವ್ಯಕ್ತಿಯು ವಾಹನ ತನ್ನದೆಂದು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನದ ಸ್ವಾಧೀನ ಪಡೆಯುವ ಬಗ್ಗೆ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆ ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸದ್ರಿ ಸೊತ್ತುಗಳು ತಮ್ಮದೆಂದು ಅವುಗಳು ಕಾನೂನುಬದ್ಧವಾಗಿದೆಯೆಂದು ಸಾಕ್ಷ್ಯಾಧಾರಗಳೊಂದಿಗೆ ಹಾಜರುಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43 ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸೊತ್ತುಗಳಾಗಿದ್ದಲ್ಲಿ ಅಂತಹ ವಸ್ತುಗಳನ್ನು ಕಲಂ 43(ಸಿ) ಅಡಿಯಲ್ಲಿ ಅಕ್ರಮ ಮದ್ಯವನ್ನು ಮತ್ತು ಅಕ್ರಮ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದೆ.

ಈ ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿ:25.3.2004 ರಂದು ಸದರಿ ಸ್ಯಾಂಟ್ರೋ ಕಾರಿನಲ್ಲಿ ಅಕ್ರಮವಾಗಿ 129.600 ಲೀಟರ್ ಮದ್ಯ ಸಾಗಾಣಿಕೆ ಮಾಡುತ್ತಿದ್ದುದ್ದನ್ನು ಅಬಕಾರಿ ಉಪ ನಿರೀಕ್ಷಕರು, ಸುರತ್ಕಲ್ ಉಪ ವಲಯ ಇವರು ಪತ್ತೆ ಹಚ್ಚಿ, ಸ್ಥಳ ಮಹಜರಿನೊಂದಿಗೆ ಅಕ್ರಮ ಮದ್ಯವನ್ನು ಮತ್ತು ಮದ್ಯ ಸಾಗಾಣಿಕೆಗೆ ಬಳಸಲಾಗಿದ್ದ ವಾಹನವನ್ನು ಜಪ್ತಿಪಡಿಸಿರುತ್ತಾರೆ. ಜಪ್ತಿಪಡಿಸಿರುವ ಮದ್ಯವು ರಾಸಾಯನಿಕ ತಜ್ಞರ ವರದಿ ಪ್ರಕಾರ ನಕಲಿ ಮದ್ಯವೆಂದು ದೃಡಪಟ್ಟಿದ್ದು, ಸದ್ರಿ ಅಕ್ರಮ ಮದ್ಯಗಳ ಸಾಗಾಣಿಕೆ ಬಗ್ಗೆ ದಸ್ತಗಿರಿ ಮಾಡಿದ ಆರೋಪಿ ಶ್ರೀ ಅರವಿಂದ ಅಂಚನ್ ವಾಹನ ಮಾಲೀಕನಾಗಿದ್ದು, ತಾನೇ ಕಾನೂನು ಬಾಹಿರ ದಿನಾಂಕ: 25.3.04 ರಂದು ಅಪರಾಧ ಕೃತ್ಯವನ್ನು ಎಸಗಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಸಾಬೀತಾಗಿರುತ್ತದೆ. ಸದ್ರಿ ಆರೋಪಿಯನ್ನು ಅಕ್ರಮ ಮದ್ಯ ಹಾಗೂ ವಾಹನದೊಂದಿಗೆ ಅಪರಾಧ ಸ್ಥಳದಲ್ಲೇ ದಸ್ತಗಿರಿ ಮಾಡಲಾಗಿದೆ. ಇದರಿಂದ ಅಕ್ರಮ ಮಧ್ಯ ಸಾಗಾಣಿಕೆಯಾಗಿರುವುದು ಸ್ಪಷ್ಟವಾಗಿರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಸದರಿ ಪ್ರಕರಣದಲ್ಲಿ ವಾಹನ ಮತ್ತು ಅಕ್ರಮ ಮದ್ಯವನ್ನು ಜಪ್ತಿಪಡಿಸಿ ಸುಮಾರು 8 ತಿಂಗಳು ಕಳೆದಿದ್ದರೂ ಸದರಿ ಸೊತ್ತುಗಳಿಗೆ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದರಿಂದ ಹಾಗೂ ದಸ್ತಗಿರಿ ಮಾಡಿದ ಆರೋಪಿಯು ಪ್ರಾದೇಶಿಕ ಸಾರಿಗೆ ಅಧಿಕಾರಿಯವರಿಂದ ವಾಹನ ಮಾಲೀಕರೆಂದು ದೃಢಪಟ್ಟಿರುವುದರಿಂದ, ವಾಹನ ಮಾಲೀಕನು ತನ್ನ ಕಾರನ್ನು ಕಾನೂನು ಬಾಹಿರ ಕೃತ್ಯವನ್ನು ಎಸಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಈ ಪ್ರಾಧಿಕಾರದಿಂದ ಕಲಂ 43(ಬಿ) ರೀತ್ಯಾ ನೀಡಲಾಗಿರುವ ದಿ: 19.10.2004ರ ಕಾರಣ ಕೇಳಿ ನೋಟೀಸು ಅಂಚೆ ಇಲಾಖೆಯಿಂದ ವಿಳಾಸದಲ್ಲಿ ಸದ್ರಿ ವ್ಯಕ್ತಿ ಲಭ್ಯವಿರುವುದಿಲ್ಲವೆಂಬ ಕಾರಣ ತಿಳಿಸಿ, ಹಿಂದಕ್ಕೆ ಬಂದಿರುತ್ತದೆ. ಜಪ್ತಿಪಡಿಸಿದ ವಾಹನವನ್ನು ತೆರೆದ ಜಾಗದಲ್ಲಿ ನಿಲ್ಲಿಸಿರುವುದರಿಂದ ಮಳೆ, ಬಿಸಿಲು ಮುಂತಾದ ಹವಾಮಾನ ವೈಪರೀತ್ಯದಿಂದ ವಾಹನವು ತನ್ನ ಗುಣಮಟ್ಟವನ್ನು ದಿನೇದಿನೇ ಕಳೆದುಕೊಳ್ಳುವ ಹಾಗೂ ಹಾಳಾಗುವ ಸಾಧ್ಯತೆಗಳಿರುವುದರಿಂದ ಹಾಗೂ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ವಶಪಡಿಸಿಕೊಂಡ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಸೂಕ್ತವೆಂದು ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಂಡು ಈ ಆದೇಶ.

**ಆದೇಶ**

ಎನ್.ಎಂ. ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ ಅಧಿನಿಯಮ 1965ರ ಕಲಂ 43(ಎ) ಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, 43(ಬಿ) ರನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಕಲಂ 43(ಸಿ) ರನ್ವಯ ಅಬಕಾರಿ ಉಪ ನಿರೀಕ್ಷಕರು, ಸುರತ್ಕಲ್ ಉಪ ವಲಯರವರ ಮೊಕದ್ದಮೆ ಸಂಖ್ಯೆ: 4/2003-04 ದಿನಾಂಕ: 25.3.2004 ರಲ್ಲಿ ವಶಪಡಿಸಿಕೊಂಡಿರುವ ವಾಹನ ಸ್ಯಾಂಟ್ರೊ ಕಾರು ಸಂಖ್ಯೆ: ಕೆಎ-19-ಎನ್-3508 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿ: 8.11.2004 ರಂದು ಶೀಘ್ರಲಿಪಿಗಾರರಿಗೆ ಉತ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಪಿ.ಆರ್. 1644 ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**IN THE COURT OF THE ADDITIONAL REGISTRAR OF CO-OPERATIVE SOCIETIES (INDL & MISC)**
**Office of The Registrar of Co-Operative Socieites, No.1, Ali Askar Road, Bangalore - 560 052**
**DIS No. A(I/M) DIS/D2/1241/2004-2005**

**PETITIONER** Vs **RESPONDENTS**

General Manager,
Janatha Co-operative Bank Ltd.,
IInd Floor, Kaniyoor Mutt Bldg., Ltd.,
Car Street, Udupi-576101

1. Chief Executive,
   Cauvery urban Co-operative Bank
   No.1259/691, 13th cross, II stage,
   Girinagar, Bangalore.
2. Sri H.M. Ramaiah,
   Ex-President, Cauvery urban Co-operative
   Bank Ltd., No.1259/691, 13th cross,
   II Stage, Girinagar, Bangalore-560 050.

**NOTICE OF ATTACHMENT OF IMMOVABLE PROPERTIES UNDER SECTION 103 OF THE KARNATAKA CO-OPERATIVE SOCIETIES ACT 1959**

1. Whereas, the Petitioner Bank has filed the above dispute before me u/s 70 of the Karnataka co-operative Societies Act 1959 for recovery of a sum of Rs. 71,31,250-00 along with further interest at 18% from the Respondents. The dispute is taken on file under Dispute No.A(I&M)DIS/D2/1241/2004-2005.

2. Whereas it is brought to my notice by the petitioner Bank by an application filed under section 103 of the Karnataka co-operative Societies Act 1959, that the Respondents are contemplating to convey, alienate or dispose the immovable properties belonging to the IInd Respondent mentioned in the Schedule hereunder, with the intent to delay the enforcement or execution of any award or order that may be passed in the above dispute against them.

3. Whereas the Petitioner Bank has further stated that if the Respondents are not prevented from doing so, the petitioner Bank will be left with no means to recover the amount even if any award/decree is obtained against the Respondents.

4. Whereas, I am fully convinced that the disposal of Schedule property of the IInd Respondent would defeat or delay the enforcement or execution of any order/decree that may be passed against the Respondents.

5. Hence, I pass the following order.

**ORDER**

Under the circumstances explained above and in exercise of powers vested in me under section 103 of the Karnataka co-operative societies Act, 1959, as conferred by the Government Notification No. CMW/169/CLM/2001, dated 21-1-2001, I, B. Nagaraja, Additional Registrar of co-operative Societies (Indl & Misc.,) Bangalore do here by order the conditional attachment of the immovable properties of the IInd Respondent as mentioned in the Schedule hereunder before Judgement in the above case.

Notice is hereby given to the IInd Respondent that if he desire to have the conditional attachment raised, he should furnish cash security to the extent of Rs.71,32,000-00 (Rupees Seventy oner lakhs thirty two thousand only) by depositing the said amount in the petitioner Cooperative Bank in the name of the Additional Registrar of Cooperative Societies (Ind & Misc) Bangalore under Suspense Account and produce the originbal receipt/challan issued thereon to this office on or before 22.11.2004 without fail.

If they fail to furnish the cash security as ordered above within the stipulated period, this conditional attachment will be confirmed as made absolute.

Notice is also hereby given to persons purchasing or acquiring the properties mentioned in the schedule hereunder that they will do so subject to this attachment.

**SCHEDULE OF PROPERTY**

All the piece and parcel of the property bearing No.1259, consisting of Ground floor, First floor and Second floor in the layout formed by Vishwabharathi Housing Complex, 13th cross, II Stage, Girinagar, Bangalore-560 085, bounded on

East by - Road
West by - Private property
North by - Private property
South by - private property
measuring 40 x 60 = 2400 Sq.Ft.

Given under my hand and seal this the 11th day of October 2004.

P.R. 1645 Additional Registrar of Coop.societies (Indl. & Misc).

**PROCEEDINGS OF THE ASST. REGISTRAR OF CO-OPERATIVE SOCIETIES, II CIRCLE, CHAMARAJPET, BANGALORE-560 018**

**Sub:** Regarding sale confirmation of immovable property of Sri K. Udaya Nair Residing at No. 5/3, Beguru Hobli, Jakkasandra, Bangalore South Taluk, Bangalore. Relating to C.E.P. No. ARB II(45)/CEP/5777/2003-2004 in favour of Sri T.N. Jinesh S/o T.V.N. Prasad, residing at No.290/14, 3rd Main, 5th 'A' Cross, Jakkasandra Village, Sarjapura Main Road, Koramangala Ist Block, Bangalore-34.

**Ref:** ARB II/CONFIRMATION/ 12 /04-05 dated 29.10.2004 and Sale proceedings date 5.10.2004 of the Sale officer of the Bangalore City Co-Operative Bank Ltd., Bangalore-18.

**Preamble:-**

Sri K. Udaya Nair Residing at No.5/3, Beguru Hobali, Jakkasandra, Bangalore South Taluk, Bangalore, have borrowed loan from the Bangalore City Co-operative Bank Ltd., Koramangala Branch, Madivala, Bangalore-560 068. The Judgement debtor Sri K. Udaya Nair S/o Late A.K. Kutty have failed to repay the loan amount to the petitioner bank in time, consequent of which a decree bearing award No. JRB/DIS/321/2002-2003, dated 7.1.2004 for Rs. 1,78,429/- as on 13.9.2003 plus further interest at the rate of 16.5% penal Interest at the rate of 2% and other cost obtained against Sri K. Udaya Nair S/o Late A.K. Kutty In this connection execution petition was filed for execution of decree against the immovable property mortgaged by Sri K. Udaya Nair S/o Late A.K. Kutty residing at No. 5/3, Beguru Hobli, Jakkasandra, Bangalore South Taluk, Bangalore brought for sale and public auction on 5.10.2004 by the sale officer of the Bangalore City Co-operative Bank Ltd., Koramangala Branch, Madivala, Bangalore-560 068, and immovable property was sold in public auction for Rs.4,25,000/- in favour of Sri T.N. Jinesh S/o T.V.N. Prasad, residing at No.290/14, 3rd Main, 5th 'A' Cross, Jakkasandra Village, Sarjapura Main Road, Koramangala Ist Block, Bangalore-34. Since he was the highest bidder in the public auction conducted on 5.10.2004.

From the perusal of the records of the sale officer of the Bangalore City Co-Op. Bank Ltd., Koramangala Branch, Madivala, Bangalore-560 068 submitted to this office, it is seen that the sale officer followed the sale procedure laid under rule 38 (2) (d) of Karnataka Co.op. societies rules 1960. In view of the proceedings of the sale officer after verifying and going through the records the following order is therefore passed.

**ORDER**

In exercise of Powers vested under rule 38 (6) (a) of the Karnataka Co op. Societies rules 1960 the sale of the mortgaged property bearing No.5/3, Beguru Hobli, Jakkasandra, Bangalore South Taluk, Bangalore by the Sale Officer attached to the Bangalore City Co-Op. Bank Ltd., Pampamahakavi Road, Bangalore - 18. In public auction conducted on 5.10.2004 of the property detailed in the schedule.

**SCHEDULE OF THE PROPERTY**

Property bearing No. 5/3, Beguru Hobli, Jakkasandra, Bangalore South Taluk, Bangalore.

**BOUNDARIES**

| | | |
|---|---|---|
| East by | : | Venkatesh House |
| West by | : | Road |
| North by | : | M. Venkatesh Property |
| South by | : | Portion of the Same Property |

In execution of C.E.P. No. ARB II (45)/CEP/5777/2003-2004 the above said property is therefore confirmed in favour of Sri T.N. Jinesh S/o T.V.N. Prasad, residing at No.290/14, 3rd Main, 5th 'A' Cross, Jakkasandra Village, Sarjapura Main Road, Koramangala Ist Block, Bangalore-34 for Rs.4,25,000/- (Rupees Four Lakhs Twenty Five Thousand only) since he was the highest bidder in the auction sale conducted on 5.10.2004.

Given under my hand and seal on this 29.10.2004.

Assistant Registrar of Co-operative Societies, 2nd Circle,
Chamarajpet, Bangalore-560 018.

P.R. 1646

**DEPARTMENT OF COMMERCIAL TAXES**

**Office of the Assistant Commissioner of Commercial Taxes,**
**35th Circle, Devatha Mansion, Gandhi Nagar, Bangalore - 560 009**
**Notification No. ACCT-35/T-271/2004-05, Dated 4th November 2004**

In pursuance of the provisions contained in Rule 6 of the Central Sales Tax (Karnataka) Rules 1957, it is hereby notified for General Information that the following declaration Form 'C' referred to subsection (4) of Section 8 of the Central Sales Tax Act, 1956 are declared to be invalid and void as the reasons that these 16 'C' Forms and Certificate of registration are obtained fraudulently by Proprietor of M.s Gayatri Paper Agencies No. C/56, Ist Floor, M.T. Street, R.T. Street Cross-I, Bangalore-53 by furnishing the untrue and false information and also the evidences and documents enclosed in the application for change of address are conclusively proved to be fabricated.

The details are as under:

| 1<br>Nos (including Code No) of declaration forms misused | 2<br>Name & address of the dealer whom declaration from is/are issued by the Dept. with date of issue. | 3<br>Registration No. of the dealer under CST Act 1956 | 4<br>The address of the dealer whom the declaration is/are sent. | 5<br>Date of issue of forms by the dealer |
|---|---|---|---|---|
| Sl.No. TCK-R 3102752 to TCK-R 3102767 (Total 16 'C' froms) | CHANDAN SINGH, No. C/56 Ist Floor, M.T.Street, R.T.Street Cross-I, Bangalore-53 | 71263652 | CHANDAN SINGH, No. C/56 Ist Floor, M.T.Street, R.T.Street Cross-I, Bangalore-53 | Not Applicable |

| 6<br>Whether lost/ destroyed or stolen | 7<br>Remarks. |
|---|---|
| Obtained fradulently | All the 'C' forms declared as Invalid and void. |

**D.K. KULKARNI**
Assistant Commissioner of Commercial Taxes, 35th Circle, Bangalore.

P.R. 1647

## ನಗರಾಭಿವೃದ್ಧಿ ಇಲಾಖೆ

### ಅಧಿಸೂಚನೆ ಸಂಖ್ಯೆ: ನಅಇ 425 ಬೆಮಪ್ರಾ 2002, ಬೆಂಗಳೂರು, ದಿನಾಂಕ: 10ನೇ ನವೆಂಬರ್ 2004

ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಿಗಳ ಕಾಯ್ದೆ 1987ರ ಕಲಂ 19(7) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987 ರ ಅಧಿನಿಯಮ 19(1) ರನ್ವಯ ಸಂಖ್ಯೆ. ನಅಇ 60 ಬೆಮಪ್ರಾ 2002, ದಿನಾಂಕ: 12.11.2003 ರಂದು ವಸತಿ ಯೋಜನೆಗಾಗಿ ಅಧಿಸೂಚನೆ ಹೊರಡಿಸಿರುವ ಜಮೀನುಗಳ ಪೈಕಿ ಈ ಕೆಳಗಿನ ಅನುಸೂಚಿಯಲ್ಲಿ ನಮೂದಿಸಿರುವ ಜಮೀನನ್ನು ಭೂ ಸ್ವಾಧೀನ ಪ್ರಕ್ರಿಯೆಯಿಂದ ಕೈ ಬಿಡಲಾಗಿದೆ.

| ಅ. ಬಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು ಹಾಗೂ ಇತರೆ ಚಿಕ್ಕುಗಳು ಮತ್ತು ಋಣಗಳು | ಸರ್ವೆ ನಂ. | ಜಮೀನಿನ ತರಹೆ | ಅವಶ್ಯವಿರುವ ಕ್ಷೇತ್ರ | ಆಕಾರ | ಚೆಕ್ಕುಬಂದಿ | | | |
|---|---|---|---|---|---|---|---|---|---|---|
| | | | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1. | ಶ್ರೀ ಹಿರೇಮಠ ಮಹೇಶ್ವರ ನಾಗಯ್ಯಸ್ವಾಮಿ | ಸ್ವಂತ<br>1) ಸದರಿ ಜಮೀನು ಶೇತ್ಕಿ ಕೆಲಸಕ್ಕೆ ಉಪಯೋಗಿಸತಕ್ಕದ್ದು<br>2) ಶೇತ್ಕಿಯೇತರ ಉದ್ದೇಶಕ್ಕೆ ಉಪಯೋಗಿಸಬೇಕಾದಲ್ಲಿ ಸಕ್ಷಮ ಅಧಿಕಾರಿಗಳಿಂದ ಪರವಾನಗಿ ಪಡೆಯಬೇಕು ತಪ್ಪಿದಲ್ಲಿ ದಂಡಕ್ಕೆ ಪಾತ್ರರಾಗಬೇಕು ವಗೈರೆ ಷರತ್ತುಗಳಿಗೆ ಒಳಪಟ್ಟಿದೆ. | 138 | ಸ.ನಿ.ತ. | 0-16-0 | 0-71 | 136<br>137 | 139 | 141 | 147 |

ವಿ. ಶ್ರೀಧರಮೂರ್ತಿ

ಪಿ.ಆರ್. 1648 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ಭದ್ರಾವತಿ ವಿಭಾಗ, ಭದ್ರಾವತಿ

### ಅಧಿಸೂಚನೆ ಸಂಖ್ಯೆ:ಎಫ್‌ಓಸಿ-ಸಿಓಎನ್-ಸಿಆರ್-7/04-05, ದಿನಾಂಕ: 30ನೇ ಜೂನ್ 2004

ಭದ್ರಾವತಿ ವಿಭಾಗದ ವ್ಯಾಪ್ತಿಯಲ್ಲಿರುವ ಶ್ರೀಗಂಧದ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಉಂಬ್ಲೆಬೈಲು ವಲಯದ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು, ಸದರಿ ವಾಹನವನ್ನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71 (ಎ)ರ ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ತಪಶೀಲು ಈ ಕೆಳಕಂಡಂತಿರುತ್ತದೆ.

| ಕ್ರ. ಸಂ. | ವಾಹನಗಳ ವಿವರ | ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1. | ಯಮಹ ಆರ್‌ಎಕ್ಸ್ 100 ಬೈಕ್ ನೋಂದಣಿ ಸಂಖ್ಯೆ: ಕೆಎ-17-ಇ-8387 | ವಲಯ ಅರಣ್ಯಾಧಿಕಾರಿ, ಉಂಬ್ಲೆಬೈಲು, ಇವರ ಅರಣ್ಯ ಮೊಕದ್ದಮೆ ಸಂ: 37/04-05 ದಿ:24.6.04 | ಐ ಎಲ್ ಐ /3655 ಡಿ | ಐ ಎಲ್ ಐ /186551 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರೂ ವಾರಸುದಾರರು ಇಲ್ಲಿಯವರೆಗೂ ಹಾಜರಾಗದೇ ಇರುವುದರಿಂದ ಸದರಿ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕುಬಾಧ್ಯತೆಗಳನ್ನು ಕೆಳಸಹಿ ಮಾಡಿರುವವರ ಸಮ್ಮುಖದಲ್ಲಿ ಈ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನವನ್ನು ಶ್ರೀಗಂಧ ಮತ್ತು ಇತರೆ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳ ಅಧಿಕೃತ ಸಮಜಾಯಿಸಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿದಾರರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲ್ಕಂಡ ವಾಹನದ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನವನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71 (ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,

ಪಿ.ಆರ್. 1649 ಭದ್ರಾವತಿ ವಿಭಾಗ, ಭದ್ರಾವತಿ.

## ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ಭದ್ರಾವತಿ ವಿಭಾಗ, ಭದ್ರಾವತಿ

### ಅಧಿಸೂಚನೆ ಸಂಖ್ಯೆ:ಎಫ್‌ಓಸಿ-ಸಿಓಎನ್-ಸಿಆರ್-8/04-05, ದಿನಾಂಕ: 5ನೇ ಜುಲೈ 2004

ಭದ್ರಾವತಿ ವಿಭಾಗದ ವ್ಯಾಪ್ತಿಯಲ್ಲಿರುವ ಶ್ರೀಗಂಧದ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಚನ್ನಗಿರಿ ವಲಯದ ಸಿಬ್ಬಂದಿಯವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು, ಸದರಿ ವಾಹನವನ್ನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71 (ಎ)ರ ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ತಪಶೀಲು ಈ ಕೆಳಕಂಡಂತಿರುತ್ತದೆ.

| ಕ್ರ. ಸಂ. | ವಾಹನಗಳ ವಿವರ | ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1. | ಸುಜುಕಿ ಮೋಟರ್ ಸೈಕಲ್ ಕೆಎ-14-ಜೆ 3238 | 36/04-05 ದಿನಾಂಕ: 29.6.2004 | 161011749503 | 1610-F 7042-65 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರೂ ವಾರಸುದಾರರು ಇಲ್ಲಿಯವರೆಗೂ ಹಾಜರಾಗದೇ ಇರುವುದರಿಂದ ಸದರಿ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕುಬಾಧ್ಯತೆಗಳನ್ನು ಕೆಳಸಹಿ ಮಾಡಿರುವವರ ಸಮ್ಮುಖದಲ್ಲಿ ಈ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನವನ್ನು ಶ್ರೀಗಂಧ ಮತ್ತು ಇತರೆ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು

ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳ ಅಧಿಕೃತ ಸಮಜಾಯಿಸಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿದಾರರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲ್ಕಂಡ ವಾಹನದ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನವನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71 (ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,

ಪಿ.ಆರ್. 1650 ಭದ್ರಾವತಿ ವಿಭಾಗ, ಭದ್ರಾವತಿ.

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ಭದ್ರಾವತಿ ವಿಭಾಗ, ಭದ್ರಾವತಿ**

**ಅಧಿಸೂಚನೆ ಸಂಖ್ಯೆ:ಎಫ್‌ಓಸಿ-ಸಿಓಎನ್-ಸಿಆರ್-13/04-05, ದಿನಾಂಕ: 23ನೇ ಸೆಪ್ಟೆಂಬರ್ 2004**

ಭದ್ರಾವತಿ ವಿಭಾಗದ ವ್ಯಾಪ್ತಿಯಲ್ಲಿರುವ ಶ್ರೀಗಂಧದ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ತರೀಕೆರೆ ಉಪವಿಭಾಗದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಮತ್ತು ಸಿಬ್ಬಂದಿಯವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು, ಸದರಿ ವಾಹನವನ್ನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71 (ಎ)ರ ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ತಪಶೀಲು ಈ ಕೆಳಕಂಡಂತಿರುತ್ತದೆ.

| ಕ್ರ. ಸಂ. | ವಾಹನಗಳ ವಿವರ | ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1. | ಟಾಟಾ ಸುಮೋ ಸಂಖ್ಯೆ: ಕೆಎ-25-ಎಂ-7272 | ಅರಣ್ಯ ಮೊಕದ್ದಮೆ ಸಂಖ್ಯೆ: 88/2004-05 ದಿನಾಂಕ: 13.9.04 | FUQ 483 DLA 748568 | 385003 FUQ 911740 |
| 2. | ಸುಜುಕಿ ದ್ವಿಚಕ್ರ ವಾಹನ ಸಂ: ಕೆಎ-16-ಹೆಚ್-0044 | | 1510 M 606813 | 1510 F 563006 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರೂ ವಾರಸುದಾರರು ಇಲ್ಲಿಯವರೆಗೂ ಹಾಜರಾಗದೇ ಇರುವುದರಿಂದ ಸದರಿ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕುಬಾಧ್ಯತೆಗಳನ್ನು ಕೆಳಸಹಿ ಮಾಡಿರುವವರ ಸಮ್ಮುಖದಲ್ಲಿ ಈ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನವನ್ನು ಶ್ರೀಗಂಧ ಮತ್ತು ಇತರೆ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳ ಅಧಿಕೃತ ಸಮಜಾಯಿಸಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿದಾರರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲ್ಕಂಡ ವಾಹನದ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನವನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71 (ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,

ಪಿ.ಆರ್. 1651 ಭದ್ರಾವತಿ ವಿಭಾಗ, ಭದ್ರಾವತಿ.

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡುವಳಿಗಳು**

**ವಿಷಯ:** ಹಾಸನ ಗ್ರಾಮಾಂತರ ಜಿಲ್ಲೆ, ಅರಕಲಗೂರು ತಾಲ್ಲೂಕು, ಮಸವತ್ತೂರು ಗ್ರಾಮದಲ್ಲಿ ಅಲಂಕಾರಿಕ ಶಿಲೆಗಾಗಿ ಶ್ರೀ ನಜೀರ್ ಬೇಗ್ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 214ರ ಗುತ್ತಿಗೆಯನ್ನು ಲ್ಯಾಪ್ಸ್‌ಡ್ ಲೀಸ್ ಎಂದು ಪರಿಗಣಿಸುವ ಬಗ್ಗೆ.

**ಉಲ್ಲೇಖ:**
1. ಕೇಂದ್ರ ಕಛೇರಿ ಪತ್ರ ಸಂಖ್ಯೆ:ಗಭೂಇ:ಡಿಸಿಬಿ:ಕಗಗು:214:2003-04:5897 ದಿನಾಂಕ:27.10.2003.
2. ಹಿರಿಯ ಭೂವಿಜ್ಞಾನಿ (ಖ), ಹಾಸನ ರವರ ಪತ್ರ ಸಂಖ್ಯೆ: ಗಭೂಇ:ಹಾಖವಿ:ಕಗಗು:2004-05:1215 ದಿನಾಂಕ: 27.6.2004.

**ಪ್ರಸ್ತಾವನೆ:**

ಹಾಸನ ಗ್ರಾಮಾಂತರ ಜಿಲ್ಲೆ, ಅರಕಲಗೂರು ತಾಲ್ಲೂಕು, ಮಸವತ್ತೂರು ಗ್ರಾಮದ ಸರ್ವೆ ನಂ. 183 ರಲ್ಲಿ ಶ್ರೀ ನಜೀರ್ ಬೇಗ್ ರವರಿಗೆ 1.18 ಎಕರೆಗೆ ದಿ: 12.10.1998 ರಿಂದ 10 ವರ್ಷಗಳಿಗಾಗಿ ಕಲ್ಲುಗಣಿ ಗುತ್ತಿಗೆಯನ್ನು ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರ (2)ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ, 2004ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ. 91,947/- ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ರಂತೆ ಸರ್ಕಾರದ ಅಧಿಸೂಚನೆ III ಸಂಖ್ಯೆ:ಸಿಐ 418 ಎಂ.ಆರ್.ಸಿ 92 ದಿನಾಂಕ:2.7.94ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ಲ್ಯಾಪ್ಸ್‌ಡ್ ಲೀಸ್ ಎಂದು ಪರಿಗಣಿಸಬೇಕಾಗಿದೆ.

**ಆದೇಶ ಸಂ:ಗಭೂಇ:ಡಿಸಿಬಿ:ಕಗಗು:214:2004-05/12066 ದಿನಾಂಕ: 22ನೇ ನವೆಂಬರ್ 2004**

ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ರಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಹಾಸನ ಜಿಲ್ಲೆ, ಅರಕಲಗೂರು ತಾಲ್ಲೂಕು, ಮಸವತ್ತೂರು ಗ್ರಾಮದ ಸರ್ವೆ ನಂ.183ರಲ್ಲಿ 1.18 ಎಕರೆಗೆ ಅಲಂಕಾರಿಕ ಶಿಲೆಗಾಗಿ ಮಂಜೂರು ಮಾಡಲಾದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:214 ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಲ್ಯಾಪ್ಸ್‌ಡ್ ಲೀಸ್ ಎಂದು ಪರಿಗಣಿಸಲಾಗಿದೆ.

ನಿರ್ದೇಶಕರು

ಪಿ.ಆರ್. 1653 ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡುವಳಿಗಳು**

**ವಿಷಯ:** ಹಾಸನ ಗ್ರಾಮಾಂತರ ಜಿಲ್ಲೆ, ಅರಕಲಗೂರು ತಾಲ್ಲೂಕು, ಮಸವತ್ತೂರು ಗ್ರಾಮದಲ್ಲಿ ಅಲಂಕಾರಿಕ ಶಿಲೆಗಾಗಿ ಶ್ರೀ ನಜೀರ್ ಬೇಗ್ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 215ರ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸುವ ಬಗ್ಗೆ.

**ಉಲ್ಲೇಖ:** 1. ಕೇಂದ್ರ ಕಛೇರಿ ಪತ್ರ ಸಂಖ್ಯೆ:ಗಭೂಇ:ಡಿಸಿಬಿ:ಕಗಗು:215:2003-04:6088 ದಿನಾಂಕ:11.11.2003.

2. ಹಿರಿಯ ಭೂವಿಜ್ಞಾನಿ (ಖ), ಹಾಸನ ರವರ ಪತ್ರ ಸಂಖ್ಯೆ: ಗಭೂಇ:ಹಾಖವಿ:ಕಗಗು:215:2004-05:1214 ದಿನಾಂಕ: 19.6.2004.

**ಪ್ರಸ್ತಾವನೆ:**

ಹಾಸನ ಗ್ರಾಮಾಂತರ ಜಿಲ್ಲೆ, ಅರಕಲಗೂರು ತಾಲ್ಲೂಕು, ಮಸವತ್ತೂರು ಗ್ರಾಮದ ಸರ್ವೆ ನಂ. 183 ರಲ್ಲಿ ಶ್ರೀ ನಜೀರ್ ಬೇಗ್ ರವರಿಗೆ 1.18 ಎಕರೆಗೆ ದಿ: 12.10.1998 ರಿಂದ 10 ವರ್ಷಗಳಿಗಾಗಿ ಕಲ್ಲುಗಣಿ ಗುತ್ತಿಗೆಯನ್ನು ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರ (2)ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ, 2004ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ. 91,947/- ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ರಂತೆ ಸರ್ಕಾರದ ಅಧಿಸೂಚನೆ III ಸಂಖ್ಯೆ:ಸಿಐ 418 ಎಂ.ಆರ್.ಸಿ 92 ದಿನಾಂಕ:2.7.94ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸಬೇಕಾಗಿದೆ.

**ಆದೇಶ ಸಂ:ಗಭೂಇ:ಡಿಸಿಬಿ:ಕಗಗು:215:2004-05/11998 ದಿನಾಂಕ: 20ನೇ ನವೆಂಬರ್ 2004**

ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ರಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಹಾಸನ ಜಿಲ್ಲೆ, ಅರಕಲಗೂರು ತಾಲ್ಲೂಕು, ಮಸವತ್ತೂರು ಗ್ರಾಮದ ಸರ್ವೆ ನಂ.183ರಲ್ಲಿ 1.18 ಎಕರೆಗೆ ಅಲಂಕಾರಿಕ ಶಿಲೆಗಾಗಿ ಮಂಜೂರು ಮಾಡಲಾದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:215 ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸಲಾಗಿದೆ.

ನಿರ್ದೇಶಕರು

ಪಿ.ಆರ್. 1654 ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡುವಳಿಗಳು**

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಕೋಟೆಕೊಪ್ಪ ಗ್ರಾಮದಲ್ಲಿ ಅಲಂಕಾರಿಕ ಶಿಲೆಗಾಗಿ ಶ್ರೀ ಬಿ.ಎಲ್. ವಿಶ್ವನಾಥ್ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 537ರ ಗುತ್ತಿಗೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:** 1. ಕೇಂದ್ರ ಕಛೇರಿ ಪತ್ರ ಸಂಖ್ಯೆ:ಗಭೂಇ:ಡಿಸಿಬಿ:ಕಗಗು:537:2004-05:2658 ದಿನಾಂಕ:11.8.2004.

2. ಉಪ ನಿರ್ದೇಶಕರು, ಕನಕಪುರ ರವರ ಪತ್ರ ಸಂಖ್ಯೆ: ಗಭೂಇ:ಉನಿಕ:ಕಗಗು:537:2004-05:8620 ದಿನಾಂಕ: 26.10.2004.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಕೋಟೆಕೊಪ್ಪ ಗ್ರಾಮದ ಸರ್ವೆ ನಂ. 197 ರಲ್ಲಿ ಶ್ರೀ ಬಿ.ಎಲ್. ವಿಶ್ವನಾಥ್ ರವರಿಗೆ 2-00 ಎಕರೆಗೆ ದಿ: 17.2.2002 ರಿಂದ 10 ವರ್ಷಗಳಿಗಾಗಿ ಕಲ್ಲುಗಣಿ ಗುತ್ತಿಗೆಯನ್ನು ಮಂಜೂರು ಮಾಡಲಾಗಿತ್ತು. ಉಲ್ಲೇಖಿಸಿರುವ ಕಛೇರಿ ಪತ್ರದಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ, 2004ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ. 59,084/- ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಸರ್ಕಾರದ ಅಧಿಸೂಚನೆ III ಸಂಖ್ಯೆ:ಸಿಐ 418 ಎಂ.ಆರ್.ಸಿ 92 ದಿನಾಂಕ:2.7.94ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿದೆ.

**ಆದೇಶ ಸಂ:ಗಭೂಇ:ಡಿಸಿಬಿ:ಕಗಗು:537:2004-05/12057 ದಿನಾಂಕ: 20ನೇ ನವೆಂಬರ್ 2004**

ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ರಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕಿನ, ಕೋಟೆಕೊಪ್ಪ ಗ್ರಾಮದ ಸರ್ವೆ ನಂ.197ರಲ್ಲಿ 2.00 ಎಕರೆಗೆ ಅಲಂಕಾರಿಕ ಶಿಲೆಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:537 ನ್ನು ತಕ್ಷಣದಿಂದ ರದ್ದುಪಡಿಸಲಾಗಿದೆ ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಜಾಮೀನು ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಮಾಡಿಕೊಳ್ಳಲಾಗಿದೆ.

ನಿರ್ದೇಶಕರು

ಪಿ.ಆರ್. 1655 ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು

**ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು-560 001**

**ಪ್ರಕಟಣೆ ಸಂಖ್ಯೆ:ಕರಾಆ/ಆಡಳಿತ/49/2004 ದಿನಾಂಕ: 20ನೇ ನವೆಂಬರ್ 2004**

**ವಿಷಯ:** ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 10 (1ಎ) ರಡಿಯಲ್ಲಿ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಅಧ್ಯಕ್ಷರ ಆಯ್ಕೆ ಬಗ್ಗೆ.

ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ ಹಾಗೂ ಕೊಪ್ಪಳ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಅಧ್ಯಕ್ಷರ ಆಯ್ಕೆಗಾಗಿ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸುತ್ತಿದ್ದು, ನಿಗದಿತ ನಮೂನೆಯಲ್ಲಿ ಭರ್ತಿ ಮಾಡಿದ ಅರ್ಜಿಗಳನ್ನು ಅಗತ್ಯ ದಾಖಲೆಗಳೊಂದಿಗೆ ದಿನಾಂಕ 30ನೇ ಡಿಸೆಂಬರ್ 2004ರ ಸಂಜೆ 5.00 ಘಂಟೆಯೊಳಗೆ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು-1 ಇಲ್ಲಿಗೆ ಸಲ್ಲಿಸುವುದು.

**ಅರ್ಹತೆಗಳು:**

1) ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 10(1)(a) ರನ್ವಯ, ಜಿಲ್ಲಾ ನ್ಯಾಯಾಧೀಶರಾಗಿದ್ದವರು ಅಥವಾ ಜಿಲ್ಲಾ ನ್ಯಾಯಾಧೀಶರಾಗಿ ನೇಮಕಾತಿ ಹೊಂದಲು ಅರ್ಹರಿರುವವರು ಮಾತ್ರ ಜಿಲ್ಲಾ ವೇದಿಕೆಯ ಅಧ್ಯಕ್ಷರಾಗಿ ನೇಮಕಾತಿ ಹೊಂದಲು ಅರ್ಹರು.

2) ಜಿಲ್ಲಾ ನ್ಯಾಯಾಧೀಶರಾಗಿ ನೇಮಕ ಹೊಂದಲು ಅರ್ಹರೆಂದರೆ, ಅಂಗೀಕೃತ ವಿಶ್ವವಿದ್ಯಾಲಯದ ಕಾನೂನು ಪದವೀಧರರಾಗಿರುವುದರ ಜೊತೆಗೆ, ನ್ಯಾಯವಾದಿಗಳಾಗಿ ಕನಿಷ್ಠ ಏಳು ವರ್ಷಗಳಿಗೂ ಹೆಚ್ಚು ಅವಧಿಯಲ್ಲಿ ಕಾರ್ಯ ನಿರ್ವಹಿಸಿರಬೇಕು.

3) ಅರ್ಜಿಯನ್ನು ಸಲ್ಲಿಸುವ ದಿನಾಂಕದಂದಿಗೆ 35 ವರ್ಷ ವಯಸ್ಸನ್ನು ಮೀರಿರಬೇಕು, ಹಾಗೂ 59 ವರ್ಷ ವಯಸ್ಸಿನೊಳಗೆ ಇರುವವರು ಮಾತ್ರ ಅರ್ಜಿಯನ್ನು ಸಲ್ಲಿಸುವುದು.

4) ಅರ್ಜಿಯನ್ನು ಸಲ್ಲಿಸುವ ದಿನಾಂಕದಂದಿಗೆ ಕನಿಷ್ಠ ಏಳು ವರ್ಷಗಳಿಗೂ ಹೆಚ್ಚು ಅವಧಿಯಲ್ಲಿ ನ್ಯಾಯವಾದಿಗಳಾಗಿ ಕಾರ್ಯನಿರ್ವಹಿಸುವುದರ ಜೊತೆಗೆ ಉತ್ತಮ ಗುಣ ಹಾಗೂ ನಡತೆಯನ್ನು ಹೊಂದಿರಬೇಕು.

5) ಜಿಲ್ಲಾ ವೇದಿಕೆಯ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಲು, ಗ್ರಾಹಕರ ವ್ಯಾಜ್ಯಗಳನ್ನು ಇತ್ಯರ್ಥ ಮಾಡಲು ತೀರ್ಪುಗಳನ್ನು ಬರೆಯುವ ಸಾಮರ್ಥ್ಯವನ್ನು ಹೊಂದಿರಬೇಕು.

6) ಅರ್ಜಿದಾರರು, ತಮ್ಮ ಜನ್ಮ ದಿನಾಂಕ, ವಿದ್ಯಾರ್ಹತೆ, ಅನುಭವ, ಗುಣ-ನಡತೆ ಇವುಗಳಿಗೆ ಸಂಬಂಧಿಸಿದಂತಹ ದಾಖಲೆಗಳ ಸ್ವಯಂದೃಢೀಕೃತ ಪ್ರತಿಗಳನ್ನು ಅರ್ಜಿಯೊಂದಿಗೆ ಸಲ್ಲಿಸುವುದು.

7) ಅರ್ಜಿದಾರರು, ಸರ್ಕಾರೀ ಸೇವೆಯಲ್ಲಿದ್ದರೆ, ಅರ್ಜಿಗಳನ್ನು ತಮ್ಮ ಮೇಲಾಧಿಕಾರಿಗಳ/ನೇಮಕಾತಿ ಪ್ರಾಧಿಕಾರದ ಮೂಲಕ ಸಲ್ಲಿಸಬೇಕು.

ಜಿಲ್ಲಾ ವೇದಿಕೆಯ ಅಧ್ಯಕ್ಷರಾಗಿ ನೇಮಕಾತಿ ಹೊಂದುವವರು ಜಿಲ್ಲಾ ನ್ಯಾಯಾಧೀಶರ ವೇತನ ಮತ್ತು ಇತರ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ. ನೇಮಕಾತಿಯು ಐದು ವರ್ಷಗಳ ಕಾಲಿಕ ಸೇವಾವಧಿಯಾಗಿರುತ್ತದೆ. ನಿಗದಿತ ನಮೂನೆಯ ಅರ್ಜಿಗಳನ್ನು ಕರ್ನಾಟಕ ರಾಜ್ಯ ಆಯೋಗದಲ್ಲಿ ಅಥವಾ ಬೆಂಗಳೂರು ಗ್ರಾಮಾಂತರ ಜಿಲ್ಲಾ ವೇದಿಕೆ ಅಥವಾ ಕೊಪ್ಪಳ ಜಿಲ್ಲಾ ವೇದಿಕೆಯಲ್ಲಿ ಖುದ್ದಾಗಿ ಹಾಜರಾಗಿ ಪಡೆಯಬಹುದು. ಅಂಚೆ ಮೂಲಕ ಕಳುಹಿಸುವ ವ್ಯವಸ್ಥೆ ಇಲ್ಲ.

**ನ್ಯಾಯಮೂರ್ತಿ ಚಂದ್ರಶೇಖರಯ್ಯ**

ಅಧ್ಯಕ್ಷರು, ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬೆಂಗಳೂರು.

________________ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ/ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಅಧ್ಯಕ್ಷರ/ಸದಸ್ಯರ ನೇಮಕಾತಿಗೆ ಅರ್ಜಿ

(ಅಭ್ಯರ್ಥಿಯು ತನ್ನ ಸ್ವಂತ ಕೈಬರಹದಲ್ಲಿ ಭರ್ತಿ ಮಾಡತಕ್ಕದ್ದು)

ಅ. ಅರ್ಜಿಗಳನ್ನು ಕರೆದಿರುವ ರಾಜ್ಯ ಆಯೋಗದ ಅಧಿಸೂಚನೆ ಸಂಖ್ಯೆ ಮತ್ತು ದಿನಾಂಕ

ಆ. ಸದರಿ ಅಧಿಸೂಚನೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾಗಿರುವ ದಿನಾಂಕ

ಇ. ಸದರಿ ಅಧಿಸೂಚನೆ ದಿನಪತ್ರಿಕೆಗಳಲ್ಲಿ ಪ್ರಕಟವಾಗಿರುವ ದಿನಾಂಕ (ಯಾವ ಪತ್ರಿಕೆ, ಯಾವ ದಿನಾಂಕದಂದು, ಯಾವ ಪುಟ ಮತ್ತು ಯಾವ ಅಂಕಣ ಎಂಬುದನ್ನು ನಿರ್ದಿಷ್ಟಪಡಿಸಿ)

ಇತ್ತೀಚಿನ ಪಾಸ್‌ಪೋರ್ಟ್ ಸೈಜ್‌ನ ಭಾವಚಿತ್ರವನ್ನು ಲಗತ್ತಿಸಿ

| | | |
|---|---|---|
| 1. | ಅಭ್ಯರ್ಥಿಯ ಪೂರ್ಣ ಹೆಸರು | ............................................................<br>(ಸರ್‌ನೇಮ್) (ಹೆಸರು) |
| 2. | ನೀವು ನಿಮ್ಮ ಹೆಸರನ್ನು ಯಾವಾಗಲಾದರೂ ಬದಲಾಯಿಸಿಕೊಂಡಿದ್ದೀರಾ? ಹಾಗಿದ್ದಲ್ಲಿ, ಅದಕ್ಕೆ ಕಾರಣಗಳೊಂದಿಗೆ, ಪೂರ್ಣ ವಿವರಗಳನ್ನು ಮತ್ತು ಅದನ್ನು ಆಧರಿಸುವ ದಾಖಲೆಗಳ ದೃಢೀಕೃತ ಪ್ರತಿಗಳನ್ನು ಒದಗಿಸುವುದು. (ಈ ಕಾಲಂನಲ್ಲಿ ಒದಗಿಸಿರುವ ಖಾಲಿ ಜಾಗ ಸಾಲದೇ ಇದ್ದ ಸಂದರ್ಭದಲ್ಲಿ, ಹೆಚ್ಚುವರಿ ಪುಟಗಳನ್ನು ಉಪಯೋಗಿಸಿ) | |
| 3. | **ವಿಳಾಸಗಳು:** | |
| ಅ. | ಹಾಲಿ ನಿವಾಸದ ವಿಳಾಸ, (ದೂರವಾಣಿ ಸಂಖ್ಯೆ, ಈ-ಮೇಲ್ ವಿಳಾಸ, ಫ್ಯಾಕ್ಸ್ ಸಂಖ್ಯೆಯೊಂದಿಗೆ) | (ಅ) |
| ಆ. | ನೀವು ಯಾವುದಾದರೂ ಉದ್ಯೋಗದಲ್ಲಿದ್ದೀರಾ ಅಥವಾ ಯಾವುದೇ ವೃತ್ತಿಯಲ್ಲಿದ್ದೀರಾ? ಹಾಗಿದ್ದಲ್ಲಿ ಪೂರ್ಣ ವಿವರಗಳನ್ನು ಕೊಡಿ. (ದೂರವಾಣಿ ಸಂಖ್ಯೆ, ಈ-ಮೇಲ್ ವಿಳಾಸ ಮತ್ತು ಫ್ಯಾಕ್ಸ್ ಸಂಖ್ಯೆ) | (ಆ) |

| | |
|---|---|
| 4. ತಂದೆಯ ಅಥವಾ ಪತಿಯ:<br>(ಅ) ಪೂರ್ಣ ಹೆಸರು<br>(ಆ) ಪ್ರಸ್ತುತ ನಿವಾಸದ ಪೂರ್ಣ ಅಂಚೆ ವಿಳಾಸ, ದೂರವಾಣಿ ಸಂಖ್ಯೆಯೊಂದಿಗೆ (ಬದುಕಿಲ್ಲದಿದ್ದರೆ, ಕೊನೆಯ ವಿಳಾಸವನ್ನು ನೀಡುವುದು)<br>(ಇ) ವೃತ್ತಿ-ವಿಳಾಸ ಮತ್ತು ದೂರವಾಣಿ ಸಂಖ್ಯೆಯೊಂದಿಗೆ (ಬದುಕಿಲ್ಲದಿದ್ದರೆ, ಕೊನೆಯ ವಿಳಾಸವನ್ನು ನೀಡುವುದು) | <br>(ಅ)<br>(ಆ)<br><br>(ಇ) |
| 5. ಹುಟ್ಟಿದ ದಿನಾಂಕ (ಕ್ರಿಸ್ತಶಕದಲ್ಲಿ) ವಯಸ್ಸನ್ನು ರುಜುವಾತುಪಡಿಸಲು ಹುಟ್ಟಿದ ದಿನಾಂಕವನ್ನು ಒಳಗೊಂಡ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರದ ದೃಢೀಕೃತ ಪ್ರತಿಯನ್ನು ಲಗತ್ತಿಸಿ. | |
| 6. (ಅ) ಜನ್ಮಸ್ಥಳ, ಜಿಲ್ಲೆ ಮತ್ತು ರಾಜ್ಯ.<br>(ಆ) ಪ್ರಸ್ತುತ ನೆಲೆಸಿರುವ ಜಿಲ್ಲೆ | (ಅ)<br>(ಆ) |
| 7. (ಅ) ನಿಮ್ಮ ಮತ<br>(ಆ) ನೀವು ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ವರ್ಗಕ್ಕೆ ಸೇರಿದ್ದೀರಾ? ಹೌದು ಅಥವಾ ಇಲ್ಲ ಎಂದು ಉತ್ತರಿಸುವುದು. ಉತ್ತರ ಹೌದು ಆಗಿದ್ದರೆ, ನೀವು ಸೇರಿರುವ ಸಮುದಾಯವನ್ನು ಹೆಸರಿಸುವುದು | (ಅ)<br>(ಆ) |

8. ಎಸ್.ಎಸ್.ಎಲ್.ಸಿ.ಯಿಂದ ಮೊದಲ್ಗೊಂಡು ವಿದ್ಯಾರ್ಹತೆ - ವಿದ್ಯಾಭ್ಯಾಸದ ಸ್ಥಳ, ವರ್ಷ, ಶಾಲೆ/ಕಾಲೇಜಿನ ವಿವರಗಳೊಂದಿಗೆ. (ದೃಢೀಕರಿಸಿದ ಪದವಿ/ಡಿಪ್ಲೊಮಾ ಪ್ರಮಾಣಪತ್ರಗಳ ಪ್ರತಿ ಲಗತ್ತಿಸುವುದು).

| ಶಾಲೆ/ಕಾಲೇಜು ಮತ್ತು ವಿಶ್ವವಿದ್ಯಾಲಯಗಳ ಹೆಸರು ಮತ್ತು ಪೂರ್ಣ ವಿಳಾಸ | ಪ್ರವೇಶದ ದಿನಾಂಕ | ನಿರ್ಗಮನದ ದಿನಾಂಕ | ತೇರ್ಗಡೆಯಾದ ಪರೀಕ್ಷೆ/ಪದವಿ ಹೆಸರು |
|---|---|---|---|
| | | | |

9. ನೀವು ಯಾವಾಗಲಾದರೂ ಉದ್ಯೋಗದಲ್ಲಿದ್ದಿದ್ದರೆ, ವಿವರ ಒದಗಿಸಿ.

| ಹುದ್ದೆಯ ಪದನಾಮ ಅಥವಾ ಕೆಲಸದ ವಿವರಣೆ | ಅವಧಿ | | ಕಚೇರಿ/ಸಂಸ್ಥೆಯ ಪೂರ್ಣ ವಿಳಾಸ | ಉದ್ಯೋಗವನ್ನು ತ್ಯಜಿಸಲು ಕಾರಣಗಳು |
|---|---|---|---|---|
| | ಇಂದ (ದಿನಾಂಕ) | ವರೆಗೆ (ದಿನಾಂಕ) | | |
| | | | | |

| | |
|---|---|
| 10. ನಿಮ್ಮ ಕಾಲೇಜು ಅಥವಾ ವಿಶ್ವವಿದ್ಯಾಲಯಕ್ಕೆ ಸಂಬಂಧಿಸದ ಮತ್ತು ನಿಮಗೆ ಸಂಬಂಧಿಕರಲ್ಲದ, ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ಪಡೆದ, ಚಾರಿತ್ರ್ಯ ಪ್ರಮಾಣಪತ್ರಗಳನ್ನು ಮೂಲ ಪ್ರತಿಯಲ್ಲಿ ಲಗತ್ತಿಸಿದ್ದೀರಾ? ಇಂತಹ ಪ್ರಮಾಣಪತ್ರ ಈ ಅರ್ಜಿಗೆ ಸಹಬಂಧಿಸಿರುವ ನಮೂನೆಯಲ್ಲಿ ಇರತಕ್ಕದ್ದು ಮತ್ತು ಅರ್ಜಿಯ ದಿನಾಂಕದ ಹಿಂದಿನ 6 ತಿಂಗಳ ಒಳಗೆ ಕೊಟ್ಟಂತಹ ಪ್ರಮಾಣಪತ್ರವಾಗಿರತಕ್ಕದ್ದು. | |
| 11. (ಅ) ನೀವು ಯಾವಾಗಲಾದರೂ ಅಭಿಯೋಜನೆಗೆ ಒಳಗಾಗಿದ್ದೀರಾ, ಬಂಧನಕ್ಕೆ ಒಳಗಾಗಿದ್ದೀರಾ ಅಥವಾ ಕಟ್ಟುಪಾಡಿಗೊಳಗಾಗಿದ್ದೀರಾ/ಜುಲ್ಮಾನೆಗೊಳಗಾಗಿದ್ದೀರಾ ಅಥವಾ ಯಾವುದೇ ನ್ಯಾಯಾಲಯದಿಂದ ಯಾವುದೇ ಅಪರಾಧಕ್ಕೆ ಅಪರಾಧಿಯೆಂದು ತೀರ್ಮಾನಿಸಲ್ಪಟ್ಟಿದ್ದೀರಾ?<br>(ಆ) ಈ ಅರ್ಜಿಯನ್ನು ಹಾಕುವ ಸಮಯದಲ್ಲಿ ನಿಮ್ಮ ವಿರುದ್ಧ ಯಾವುದೇ ನ್ಯಾಯಾಲಯದಲ್ಲಿ ಯಾವುದೇ ಪ್ರಕರಣ ಬಾಕಿ ಇದೆಯೇ?<br>(ಇ) ಮೇಲಿನ (ಅ) ಅಥವಾ/ಮತ್ತು (ಆ)ಗಳಿಗೆ ಯಾವುದಕ್ಕಾದರೂ ನಿಮ್ಮ ಉತ್ತರ ಹೌದು ಎಂದಾದರೆ, ಬಂಧನ/ಜುಲ್ಮಾನೆ, ಅಪರಾಧ ಸಿದ್ಧಿ, ದಂಡಾದೇಶ, ಮುಂತಾದ ವಿವರಗಳನ್ನು ಕೊಡುವುದು. | (ಅ)<br>(ಆ)<br>(ಇ) |

| | | |
|---|---|---|
| 12. | (ಅ) ನಿಮ್ಮನ್ನು ಯಾವಾಗಲಾದರೂ ಸೇವೆಯಿಂದ ವಜಾ (dismiss) ಮಾಡಲಾಗಿದೆಯೇ/ತೆಗೆದು ಹಾಕಲಾಗಿದೆಯೇ (removed)/ಹೊರ ಹಾಕಲಾಗಿದೆಯೇ (terminated)/ ಕಡ್ಡಾಯವಾಗಿ ನಿವೃತ್ತಿಗೊಳಿಸಲಾಗಿದೆಯೇ ಅಥವಾ ಸರ್ಕಾರಿ ಸೇವೆಗೆ ಪ್ರವೇಶ ಪಡೆಯದಂತೆ ನಿರ್ಬಂಧಿಸಲಾಗಿದೆಯೇ (debarred)<br>(ಆ) ಉತ್ತರ 'ಹೌದು' ಆದರೆ, ಪ್ರಕರಣದ ಪೂರ್ಣ ವಿವರಗಳನ್ನು, ಸಂಬಂಧಪಟ್ಟ ದಾಖಲೆಗಳ ದೃಢೀಕೃತ ಪ್ರತಿಗಳೊಂದಿಗೆ ಒದಗಿಸತಕ್ಕದ್ದು. ದುರ್ನಡತೆಗಾಗಿ ಅಂತಹ ವ್ಯವಹರಣೆಯನ್ನು ನಿಮ್ಮ ವಿರುದ್ಧ ನಡೆಸಲಾಗಿದ್ದಲ್ಲಿ, ಅದನ್ನು ಸ್ಪಷ್ಟವಾಗಿ ತಿಳಿಸತಕ್ಕದ್ದು. | (ಅ)<br>(ಆ) |
| 13. | ಈ ಕೆಳಕಂಡ ದಾಖಲೆಗಳನ್ನು ಲಗತ್ತಿಸಲಾಗಿದೆಯೇ?<br>1) ವಯಸ್ಸನ್ನು ರುಜುವಾತುಪಡಿಸಲು ಜನ್ಮ ದಿನಾಂಕವನ್ನು ಒಳಗೊಂಡ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರದ ದೃಢೀಕೃತ ಪ್ರತಿ.<br>2) ಹುದ್ದೆಗೆ ಬೇಕಾದ ವಿದ್ಯಾರ್ಹತೆ/ಅನುಭವಕ್ಕೆ ಸಂಬಂಧಿಸಿದ ಪ್ರಮಾಣ ಪತ್ರಗಳ ದೃಢೀಕೃತ ಪ್ರತಿ. (ದಯವಿಟ್ಟು ಗ್ರಾಹಕ ಹಿತರಕ್ಷಣಾ ಅಧಿನಿಯಮ, 1986ರ ಸೆಕ್ಷನ್ 10/16ನ್ನು ನೋಡಿ). | |
| 14. | ಅರ್ಜಿದಾರರು ವಕೀಲರಾಗಿದ್ದಲ್ಲಿ, ಅಧ್ಯಕ್ಷರು/ಸದಸ್ಯರಾಗಿ ಅವರ ನೇಮಕಾತಿಯ ನಂತರ, ಅವರ ಕೇಂದ್ರ ಸ್ಥಳವಾಗಬಹುದಾದ ಸ್ಥಳದಲ್ಲಿ, ಅವರ ಸಂಬಂಧಿಕರು ಯಾರಾದರೂ ವಕೀಲಿ ವೃತ್ತಿ ನಡೆಸುತ್ತಿದ್ದಾರೆಯೇ? ಹಾಗಿದ್ದಲ್ಲಿ, ವಿವರಗಳನ್ನು ಒದಗಿಸುವುದು. | |
| 15. | ಅರ್ಜಿದಾರನ ಈಗಿನ ವಾರ್ಷಿಕ ವರಮಾನ-ವೃತ್ತಿ, ವ್ಯಾಪಾರ, ಕಸುಬು, ಉದ್ಯೋಗ, ವ್ಯವಹಾರ, ಆಸ್ತಿ ಬಾಡಿಗೆ/ಗುತ್ತಿಗೆ, ಮುಂತಾದವುಗಳಿಂದ ವಿವರಗಳನ್ನು ಒದಗಿಸುವುದು. | |
| 16. | ಅರ್ಥಶಾಸ್ತ್ರ, ಕಾನೂನು, ವಾಣಿಜ್ಯ, ಲೇಖಾಶಾಸ್ತ್ರ, ಕೈಗಾರಿಕೆ, ಸಾರ್ವಜನಿಕ ವ್ಯವಹಾರಗಳು ಅಥವಾ ಆಡಳಿತ, ಇವುಗಳಿಗೆ ಸಂಬಂಧಿಸಿದ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ನಿಮಗೆ ಇರುವ ಜ್ಞಾನ ಮತ್ತು/ಅಥವಾ ಅನುಭವ/ ಸಾಮರ್ಥ್ಯ ವಿವರ ನೀಡುವುದು. (ಯಾವುದಾದರೂ ಇದ್ದಲ್ಲಿ, ದೃಢೀಕರಿಸಿದ ದಾಖಲೆಗಳ ಪ್ರತಿ ಒದಗಿಸುವುದು), (ದಯವಿಟ್ಟು ಗ್ರಾಹಕ ಸಂರಕ್ಷಣಾ ಅಧಿನಿಯಮ, 1986ರ ಕಲಂ 10/16ರನ್ನು ನೋಡಿ) | |

**ಸೂಚನೆ:** "ದೃಢೀಕೃತ ಪ್ರತಿ" ಎಂದರೆ ರಾಜ್ಯ ಅಥವಾ ಕೇಂದ್ರ ಸರ್ಕಾರದ ಪತ್ರಾಂಕಿತ ಅಧಿಕಾರಿ ಅಥವಾ ಸಾರ್ವಜನಿಕ ನೋಟರಿ "ಯಥಾಪ್ರತಿ" ಎಂದು ಅನುಪ್ರಮಾಣಿಸಿದ ಸಂಬಂಧಪಟ್ಟ ದಾಖಲೆಯ ಛಾಯಾಪ್ರತಿ.

**ಅರ್ಜಿದಾರರಿಂದ ಘೋಷಣೆ**

______________________________ ಎಂಬ ಹೆಸರಿನವನಾದ ನಾನು, ಮೇಲ್ಕಂಡ ಮಾಹಿತಿಯು, ನನ್ನ ಅತ್ಯುತ್ತಮ ಅರಿವು ಮತ್ತು ನಂಬಿಕೆಗಳಂತೆ, ಸರಿಯಾಗಿ ಹಾಗೂ ಸಂಪೂರ್ಣವಾಗಿರುವುದಾಗಿ ಈ ಮೂಲಕ ಘೋಷಿಸುತ್ತೇನೆ. ನೇಮಕಾತಿಗೆ ಯೋಗ್ಯತೆಯನ್ನು ದುರ್ಬಲಗೊಳಿಸುವ ಯಾವುದೇ ಸಂದರ್ಭಗಳು ನನಗೆ ತಿಳಿದಿರುವುದಿಲ್ಲ.

2. ನಾನು ಗ್ರಾಹಕ ಸಂರಕ್ಷಣಾ ಅಧಿನಿಯಮ, 1986 (ಕೇಂದ್ರ ಅಧಿನಿಯಮ ಸಂಖ್ಯೆ: 68/1986) ಮತ್ತು ಅದರಡಿ ರಚಿಸಲಾಗಿರುವ ರಾಜ್ಯ ಮತ್ತು ಕೇಂದ್ರದ ನಿಯಮಾವಳಿಗಳನ್ನು ಓದಿರುತ್ತೇನೆ. ಆ ಕಾನೂನುಗಳ ಅಡಿ ನಾನು *ಜಿಲ್ಲಾ ವೇದಿಕೆಯ/*ರಾಜ್ಯ ಆಯೋಗದ *ಅಧ್ಯಕ್ಷ/*ಸದಸ್ಯನಾಗಿ ನೇಮಕವಾಗಲು ಅರ್ಹತೆ ಹೊಂದಿರುವುದಾಗಿ ಘೋಷಿಸುತ್ತೇನೆ.

3. ನಾನು ಬಯಸುತ್ತಿರುವ ಸ್ಥಾನವು ಪೂರ್ಣಕಾಲಿಕ ಉದ್ಯೋಗ ಎಂಬುದನ್ನು ನಾನು ಅರಿತಿದ್ದೇನೆ. *ಅಧ್ಯಕ್ಷ/*ಸದಸ್ಯನಾಗಿ ನಾನು ನೇಮಕಗೊಂಡರೆ, ನನ್ನ ಪೂರ್ಣ ಕಾಲವನ್ನು ಅದಕ್ಕೆ ಸಮರ್ಪಿಸಲು ವಾಗ್ದಾನ ಮಾಡುತ್ತೇನೆ.

4. *ಅಧ್ಯಕ್ಷ/*ಸದಸ್ಯನಾಗಿ ನನ್ನ ಕಾರ್ಯಗಳ ಮೇಲೆ ಪ್ರತಿಕೂಲ ಪರಿಣಾಮ ಬೀರುವಂತಹ ಯಾವುದೇ ಹಣಕಾಸು ವ್ಯವಹಾರವನ್ನು ಅಥವಾ ಇತರ ಹಿತಾಸಕ್ತಿಯನ್ನು ನಾನು ಹೊಂದಿಲ್ಲ ಮತ್ತು ಹೊಂದುವುದಿಲ್ಲ.

*5. ನಾನು ವಕೀಲ ವೃತ್ತಿಯನ್ನು ______________________ ನಲ್ಲಿ (ಸ್ಥಳವನ್ನು ನಮೂದಿಸಬೇಕು) ನಡೆಸುತ್ತಿದ್ದು, ಈ ಅರ್ಜಿಯನ್ನು ಸಲ್ಲಿಸುತ್ತಿರುವ *ಅಧ್ಯಕ್ಷ/*ಸದಸ್ಯನಾಗಿ ಕಾರ್ಯನಿರ್ವಹಿಸುವ ಅವಧಿಗೆ, ಆ ವೃತ್ತಿಯನ್ನು ತ್ಯಜಿಸುತ್ತೇನೆ.

* ಅನ್ವಯಿಸದಿದ್ದಲ್ಲಿ ಹೊಡೆದುಹಾಕಿ.

ಸ್ಥಳ:

ದಿನಾಂಕ: ಅರ್ಜಿದಾರರ ಸಹಿ

**ಸಹಬಂಧ**

**ಚಾರಿತ್ರ್ಯ ಪ್ರಮಾಣ ಪತ್ರ**

ಶ್ರೀ ______________________ ಇವರ ಮಗನಾದ/ಮಗಳಾದ/ಹೆಂಡತಿಯಾದ ಶ್ರೀ/ಶ್ರೀಮತಿ ______________________ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ/ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಅಧ್ಯಕ್ಷ/ಸದಸ್ಯ ಹುದ್ದೆಗೆ ಅರ್ಜಿದಾರರಾಗಿದ್ದು, ಇವರು ನನಗೆ ಕಳೆದ ____________ ವರ್ಷ ಮತ್ತು ____________ ತಿಂಗಳಿನಿಂದ ಪರಿಚಿತರಾಗಿರುವರೆಂದು ದೃಢೀಕರಿಸಿದೆ. ಅರ್ಜಿದಾರರು ಒಳ್ಳೆಯ ನೈತಿಕ ಚಾರಿತ್ರ್ಯ ಮತ್ತು ಖ್ಯಾತಿಯನ್ನು ಹೊಂದಿದವರಾಗಿದ್ದಾರೆ. ಗ್ರಾಹಕ ರಕ್ಷಣಾ ಅಧಿನಿಯಮ, 1986 (ಕೇಂದ್ರ ಅಧಿನಿಯಮ 68/1986)ರ ಕಲಂ 10/16ನ್ನು ಓದಿದ ನಂತರ, ಅರ್ಜಿದಾರರು ಅಂತಹ ಅಧ್ಯಕ್ಷ/ಸದಸ್ಯತ್ವಕ್ಕೆ ನೇಮಕವಾಗಲು ಅನರ್ಹರಾಗುವಂತಹ ಯಾವುದೇ ಪೂರ್ವ ನಡತೆ ಹೊಂದಿಲ್ಲವೆಂದು ನಾನು ದೃಢೀಕರಿಸುತ್ತೇನೆ.

ಶ್ರೀ/ಶ್ರೀಮತಿ ______________________ (ಅರ್ಜಿದಾರರ ಹೆಸರು) ನನಗೆ ಸಂಬಂಧಿಕರಲ್ಲ.

ಸ್ಥಳ: ಸಹಿ ಮತ್ತು ಹೆಸರು; ಮನೆಯ ಪೂರ್ಣ ವಿಳಾಸ ಮತ್ತು

ದಿನಾಂಕ: ಕಚೇರಿ/ವೃತ್ತಿಯ ಪೂರ್ಣ ವಿಳಾಸ ಹಾಗೂ ಮನೆಯ ಮತ್ತು ಕಚೇರಿಯ

ಪಿ.ಆರ್. 1656 ದೂರವಾಣಿ ಸಂಖ್ಯೆ.

**KARNATAKA ELECTRICITY REGULATORY COMMISSION**

**6th & 7th Floor, Mahalaxmi Chambers, No. 9/2, M.G. Road, Bangalore - 560 001**

**Notification No. J/02/1/1936, Dated: 19th November 2004**

**Sub:-** Constitution of the State Advisory Committee.

In exercise of the powers conferred in Sub-Section 1 of Section 87 of the Electricity Act 2003 and Regulation 3 of the Karnataka Electricity Regulatory Commission (State Advisory Committee) Regulations 2004, the Commission hereby constitutes the State Advisory Committee with the following members with immediate effect:

| Sl. No. | Name & Address | |
|---|---|---|
| 1. | Chairman, Karnataka Electricity Regulatory Commission | Ex-officio Chairperson |
| 2. | Shri H.S.Subramanya, Member, Karnataka Electricity Regulatory Commission | Ex-Officio Member |
| 3. | Shri S.D. Ukkali, Member, Karnataka Electricity Regulatory Commission | Ex-Officio Member |
| 4. | Managing Director, Karnataka Power Transmission Corporation Limited | Existing Member |
| 5. | Managing Director, Karnataka Power Corporation Limited | Existing Member |
| 6. | Shri Ravi Ganapathi, "Arushi", Pump House Road, Madikeri, Kodagu 571 201. | Existing Member |
| 7. | President, KEB Engineers Association, No.28, Race Course Cross Road, Anand Rao Circle, Bangalore-560 001 | Existing Member |
| 8. | Shri M.G. Prabhakar, No.79, 14th Cross, 20th Main, 2nd Phase, J.P.Nagar, Bangalore-560 078 | Existing Member |
| 9. | Shri K.N. Venkatagiri Rao, Consumer Forum, Brasam Buildings, Nehru Maidan, Sagar - 577 401. | Existing Member |
| 10. | Director, Confederation of Indian Industry, No.1086, 12th Main, HAL IInd Stage, Indiranagar, Bangalore-560 008 | Existing Member |

| Sl. No. | Name & Address | |
|---|---|---|
| 11. | The Managing Director, Bhoruka Power Corporation Ltd., No.48, Lavelle Road, Bangalore-560 001. | Existing Member |
| 12. | Shri Amarnath Patil, President, Hyderabad Karnataka Chamber of Commerce, Chamber Building Complex, Super Market, Gulbarga 585 101. | Existing Member |
| 13. | Shri Prakash Kashinath Rao Patil, Ghatibhorala, Humanabad Taluk, Bidar District | Existing Member |
| 14. | Shri Raghavendra Raju, S/o Shri Venkatanarayana Raju, No.574, 8th Cross, 9th 'C' Main, R.P.C.Layout, Vijayanagar, 2nd Stage, Bangalore. | Existing Member |
| 15. | Secretary, Department of Food & Civil Supplies and Consumer Affairs, Government of Karnataka, M.S.Building, Bangalore | Ex-officio New Member |
| 16. | Managing Director, BESCOM, K.R.Circle, Bangalore - 560 001 | New Member |
| 17. | Managing Director, GESCOM, Gulbarga Main Road, Gulbarga - 585 102 | New Member |
| 18. | Shri M.N. Shankarikoppa, President, State Farmers Co-ordinatory Committee, Adur, At & PS Hangal, Haveri. | New Member |
| 19. | President, KPTCL Employees Union, 'A' Station Compound, Ananda Rao Circle, S.C.Road, Bangalore-560 009 | New Member |
| 20. | Shri A.S. Kulkarni, Secretary, Citizen's Forum, Ashoknagar Road, Near Sawai Gandharva Hall, Hubli - 580 029 | New Member |
| 21. | Shri Govindappa, Farmer Technical Member, K.E.B., No.603, 21st Main, IV Block, Jayanagar, Bangalore - 560 011 | New Member |

2. The TA/DA of officials belonging to State Government Departments and Public Sector Undertakings will be borne by the respective offices. The non-official members will be entitled to TA/DA as permissible to Group A officers of the Government of Karnataka and the expenditure will be borne by the KERC.

By Order of the Commission

P.D. 79

**M. NAGARAJ**

Secretary

**KARNATAKA POWER TRANSMISSION CORPORATION LIMITED**

**Office of the Executive Engineer Elect, K.P.T.C.L. MW Division, Gulbarga**

**Notification No. LC-61OEEE/AEE(O)/MWD/GLB/2004-05, Dated: 20th September 2004**

Karnataka Power Transmission Corporation Limited has formulated a scheme under section - 28 and clause (e) of section - 18 of the Electricity supply act 1948 and the scheme is here with published in pursuance of section 29(2) of the said act. This notification is issued for information of the license holder and any other concerned persons particulars of the scheme are as here under.

1. Name of the work : Construction of 110KV S.C. line using lynx conductor on DC towers for a distance of 38.950kms from proposed 220/110kv s/s at Shahapur to proposed 110KVs S/s at Kembhavi (KBJNL) in Shorapur Tq.
2. Salient features : To meet the lold of Indi jack well pump at Kembhavi KBJNL and to improve the power supply condition to meet the growing load in and around Kembhavi Village area in Shorapur Tq.
3. Areas passing through : 1. Hattigudur 2) Rastapur 3) Thimmapur 4) Sagar 5) Sharadalli 6) Mahalaroja 7) Darayapur 8) Ganganahalli 9) Shettikere 10) Hosakeri 11) Wanadurg 12) Chennur 13) Aladahalli 14) Buganur 15) Gowdagere 16) Sugurappa Gudda 17) Naganur 18) Paranganhalli 19) Gudlahalli 20) Yalagi 21) Kembhavi
4. Estimate cost Rs: : 550.00 lakhs

The KPTCL shall have and exercise all power which the telegraph authorities possess under part (III) of Indian Telegraph Act 1985 (13 of 1985) for implementation of the above scheme, any objection regarding the above scheme shall be sent to the Executive Engr.Elecl. MWD, KPTCL, Gulbarga within two months from the date of publication of this notification for KPTCL pursuance.

Your's faithfully,

P.D. 80

Executive Engineer Elecl MW Divn. KPTCL, Gulbarga.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**
**ನಂ.ಎಸ್‌ಡಿಕೆ:133:ಡಿಟಿಸಿಆರ್:2001-2002, ದಿನಾಂಕ: 18ನೇ ನವೆಂಬರ್ 2004**

**ಉಪಸ್ಥಿತರು:** ಗೋವಿಂದಪ್ಪ
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**
ಅಬಕಾರಿ ನಿರೀಕ್ಷಕರು,
ಮಂಗಳೂರು ಉಪ ವಿಭಾಗ, ಮಂಗಳೂರು.

**ವಿರುದ್ಧ ಆರೋಪಿಗಳು**
ಪತ್ತೆಯಾಗಿರುವುದಿಲ್ಲ.

**ಅರ್ಜಿದಾರರು:**
ಶ್ರೀ ಕೆ. ಗೋಪಾಲಕೃಷ್ಣ ನಾಯ್ಕ್,
ಬಿನ್: ಲೇಟ್ ಎಂ. ವೆಂಕಟೇಶ್ ನಾಯಕ್,
ಡೋರ್ ನಂ.9:65, ಅಳಪೆ ಪಡೀಲ್, ಮಂಗಳೂರು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ 28.09.2001 ರಂದು ಮಧ್ಯಾಹ್ನ 2.30ಕ್ಕೆ ಮಂಗಳೂರು ಉಪ ವಿಭಾಗದ ಅಬಕಾರಿ ನಿರೀಕ್ಷಕರು ತಮ್ಮ ಸಿಬ್ಬಂದಿಯವರೊಂದಿಗೆ ಮಂಗಳೂರು ನಗರದ ಕೂಳೂರು ಜಂಕ್ಷನ್‌ನಲ್ಲಿ ರಾಷ್ಟ್ರೀಯ ಹೆದ್ದಾರಿ ಸಂಖ್ಯೆ: 17ರಲ್ಲಿ ರಸ್ತೆಗಾವಲು ನಡೆಸುತ್ತಿದ್ದಾಗ, ಮಂಗಳೂರು ಕಡೆಯಿಂದ ಉಡುಪಿ ಕಡೆಗೆ ಒಂದು ಟಾಟಾ ಎಲ್.ಪಿ. ಲಾರಿ ಭಾರವಾದ ವಸ್ತುವನ್ನು ಹೇರಿಕೊಂಡು ಬರುತ್ತಿದ್ದು, ಸಂಶಯದ ಮೇಲೆ ಲಾರಿಯನ್ನು ತಡೆದು ನಿಲ್ಲಿಸಿದಾಗ ಸದ್ರಿ ಲಾರಿಯಲ್ಲಿ ಮದ್ಯದ ವಾಸನೆಯಿರುವ ರಟ್ಟಿನ ಪೆಟ್ಟಿಗೆಗಳು ಇರುವುದು ಕಂಡು ಬಂದಿದ್ದು, ಲಾರಿ ಟರ್ಪಾಲನ್ನು ತೆಗೆದು ಶೋಧಿಸುವ ವೇಳೆ ಲಾರಿಯ ಚಾಲಕ ಹಾಗೂ ಸಹ ಚಾಲಕನು ಲಾರಿಯ ಹಿಂಬದಿಯಿಂದ ಪರಾರಿಯಾಗಿದ್ದು, ಲಾರಿಯನ್ನು ಶೋಧನೆ ಮಾಡಲು ಸ್ಥಳೀಯ ಪಂಚರನ್ನು ಕರೆಯಲು ಸಿಬ್ಬಂದಿಯನ್ನು ಕಳುಹಿಸಿದ್ದು ಸದ್ರಿ ಸ್ಥಳದಲ್ಲಿ ಪಂಚರಾಗಿ ಬರಲು ಯಾರೂ ಒಪ್ಪುತ್ತಿಲ್ಲವೆಂದು ತಿಳಿಸಿರುತ್ತಾರೆ. ನಂತರ ಇಲಾಖೆಯವರನ್ನೇ ಪಂಚರನ್ನಾಗಿಸಿಕೊಂಡು ಲಾರಿ ಸಂಖ್ಯೆ: ಸಿಟಿಎಸ್-7970 ಚಾಸೀಸ್ ಸಂಖ್ಯೆ: 344-052-260290 ಮತ್ತು ಇಂಜೀನ್ ಸಂಖ್ಯೆ: 692-ಡಿ02-260-016ನ್ನು ಶೋಧನೆ ಮಾಡಲಾಗಿ ಈ ಕೆಳಕಂಡ ಮದ್ಯ ಲಾರಿಯಲ್ಲಿ ಪತ್ತೆಯಾಗಿರುತ್ತದೆ.

| ಕ್ರ. ಸಂ. | ಮದ್ಯದ ಹೆಸರು | 750 ಎಂ.ಎಲ್. | 375 ಎಂ.ಎಲ್. | 180 ಎಂ.ಎಲ್. |
|---|---|---|---|---|
| 1. | ಬ್ಯಾಗ್‌ಪೈಪರ್ ವಿಸ್ಕಿ | 104 | 45 | 74 |
| 2. | ಓಲ್ಡ್ ಮಾಂಕ್ ರಮ್ | - | 15 | 25 |
| 3. | ಮ್ಯಾಕ್‌ಡೊವೆಲ್ ವಿಸ್ಕಿ | - | - | 20 |
| 4. | ಮ್ಯಾಕ್‌ಡೊವೆಲ್ ಬ್ರಾಂದಿ | 10 | 4 | 10 |
| 5. | ರಾಕೆಟ್ ವಿಸ್ಕಿ | 49 | 73 | - |
| 6. | ಡಿಮಾಂಡ್ ವಿಸ್ಕಿ | 15 | - | - |
| 7. | ಹೈವೆ ವಿಸ್ಕಿ | - | 51 | - |
| 8. | ರಾಜಾ ವಿಸ್ಕಿ | - | - | 10 |
| | **ಒಟ್ಟು** | **178** | **188** | **139** |
| | | **505 ಪೆಟ್ಟಿಗೆಗಳು** | | |

ಮೇಲಿನ 505 ಪೆಟ್ಟಿಗೆಗಳಲ್ಲಿ 4494.960 ಲೀಟರ್ ಮದ್ಯವು ಪತ್ತೆಯಾಗಿದ್ದು, ಸದ್ರಿ ಮದ್ಯವನ್ನು ಹೊಂದಿ ಸಾಗಣೆ ಮಾಡಲು ರಹದಾರಿಯ ಬಗ್ಗೆ ವಿಚಾರ ಮಾಡಲು ಚಾಲಕ ಮತ್ತು ಸಹ ಚಾಲಕ ಪರಾರಿಯಾದ್ದರಿಂದ ಹಾಗೂ ವಾಹನದಲ್ಲಿ ಯಾವುದೇ ದಾಖಲೆಗಳು ದೊರೆಯದೇ ಇದ್ದುದರಿಂದ ಸದ್ರಿ ವಾಹನದಲ್ಲಿದ್ದ ತೆರಿಗೆ ರಹಿತ ಮದ್ಯವನ್ನು ವಾಹನ ಸಮೇತ ಇಲಾಖೆಯ ವಶಕ್ಕೆ ತೆಗೆದುಕೊಂಡು ರಾಸಾಯನಿಕ ಪರೀಕ್ಷೆಗಾಗಿ ಬ್ರಾಂಡ್‌ವಾರು ಹಾಗೂ ಗಾತ್ರವಾರಿನಿಂದ 750 ಮಿಲಿಯ 4 ಬಾಟ್ಲಿಗಳು, 375 ಮಿಲಿಯ 5 ಬಾಟ್ಲಿಗಳು ಹಾಗೂ 180 ಮಿಲಿಯ ಬಾಟ್ಲಿಗಳಿಂದ 5 ಬಾಟ್ಲಿಗಳಂತೆ ಒಟ್ಟಾಗಿ 14 ಬಾಟ್ಲಿಗಳನ್ನು ಪ್ರತ್ಯೇಕಿಸಿ, ಬಾಟ್ಲಿಗಳ ಬಾಯಿಗಳನ್ನು ಬಟ್ಟೆ ದಾರದಿಂದ ಕಟ್ಟಿ ಇಲಾಖಾ ಸೀಲ್‌ನಿಂದ ಸೀಲ್ ಮಾಡಲಾಯಿತು ಹಾಗೂ ಗುರುತಿನ ಚೀಟಿಗಳನ್ನು ಅಂಟಿಸಲಾಯಿತು. ಸ್ಥಳದಲ್ಲಿಯೇ ಮಹಜರು ಜರುಗಿಸಿ ವಶಪಡಿಸಿಕೊಂಡ ವಾಹನ ಸಂಖ್ಯೆ: ಸಿಟಿಎಸ್-7970 ನ್ನು ಮತ್ತು ಮದ್ಯವನ್ನು ವಶಕ್ಕೆ ತೆಗೆದುಕೊಂಡು ಕಛೇರಿಗೆ ಹಿಂತಿರುಗಿರುತ್ತಾರೆ ಹಾಗೂ ನ್ಯಾಯಾಲಯದಿಂದ ವಾರಂಟ್ ಪಡೆಯಲು ಸಾಧ್ಯವಾಗಿಲ್ಲದಿರುವುದರಿಂದ ಸ್ಥಳದಲ್ಲಿಯೇ ಸರ್ಚ್ ಮೆಮೋ ತಯಾರಿಸಿರುತ್ತಾರೆ. ನಂತರ ಈ ಕೃತ್ಯವು ಅಬಕಾರಿ ಕಾಯ್ದೆ ಕಲಂ 11, 12 ಮತ್ತು 14ರ ರೀತ್ಯಾ ಅಪರಾಧವಾಗಿದ್ದು, ಕಲಂ 34ರ ರೀತ್ಯಾ ಶಿಕ್ಷಾರ್ಹವಾಗಿದ್ದು ಮೊಕದ್ದಮೆ ಸಂಖ್ಯೆ: 18/2001-02 ದಿನಾಂಕ: 28.09.2001ರ ಮೂಲಕ ಮೊಕದ್ದಮೆಯನ್ನು ದಾಖಲಿಸಿ ಪ್ರಥಮ ಮಾಹಿತಿ ವರದಿಯನ್ನು ನ್ಯಾಯಾಲಯಕ್ಕೂ, ಪ್ರಾಧಿಕಾರಕ್ಕೂ ಸಲ್ಲಿಸಿ ಪ್ರಕರಣವನ್ನು ಪ್ರಾಧಿಕಾರದ ಅನುಮತಿಯಂತೆ ಮುಂದಿನ ತನಿಖೆಗಾಗಿ ಅಬಕಾರಿ ನಿರೀಕ್ಷಕರು, ಕೂಳೂರು ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ದಿನಾಂಕ:03.10.2001ರಂದು ಈ ಪ್ರಕರಣದಲ್ಲಿ ಜಪ್ತು ಪಡಿಸಲಾದ ವಾಹನದ ಮಾಲೀಕರು ಪ್ರಾಧಿಕಾರಕ್ಕೆ ತಮ್ಮ ವಕೀಲರ ಮುಖಾಂತರ ಅರ್ಜಿಯನ್ನು ಸಲ್ಲಿಸಿ ವಾಹನದ ಮಧ್ಯಂತರ ಬಿಡುಗಡೆಗೆ ಕೋರಿರುತ್ತಾರೆ. ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಮದ್ಯವು ರಾಸಾಯನಿಕ ತಜ್ಞರ ವರದಿಯಂತೆ ಮಾನವ ಸೇವನೆಗೆ ಯೋಗ್ಯವಾಗಿದ್ದು, ಸದ್ರಿ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಪ್ರಾಧಿಕಾರವು ದಿನಾಂಕ: 28.11.2001ರಂದು ಆದೇಶ ನೀಡಿರುತ್ತದೆ. ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ವಾಹನದ ಮಾಲೀಕರಿಗೆ ದಿನಾಂಕ: 23.01.2002 ರಂದು ಕಾರಣ ಕೇಳಿ ನೋಟೀಸನ್ನು ಪ್ರಾಧಿಕಾರವು ನೀಡಿರುತ್ತದೆ. ಸದ್ರಿ ನೋಟೀಸಿಗೆ ದಿನಾಂಕ: 28.01.2002ರಂದು ಉತ್ತರ ಸಲ್ಲಿಸಿರುತ್ತಾರೆ. ಜಪ್ತುಪಡಿಸಲಾದ ವಾಹನವನ್ನು ಮಧ್ಯಂತರ ಬಿಡುಗಡೆಗೆ ರೂ. 60,000/-ಗಳ ಬ್ಯಾಂಕ್ ಗ್ಯಾರಂಟಿಯನ್ನು ಹಾಗೂ ಇನ್ನಿತರ ಷರತ್ತುಗಳೊಂದಿಗೆ ಪ್ರಾಧಿಕಾರವು ದಿನಾಂಕ: 12.09.2002ರಂದು ಆದೇಶ ನೀಡಿರುತ್ತದೆ. ಸದ್ರಿ ಆದೇಶದ ವಿರುದ್ಧ ಮಾನ್ಯ ಸತ್ರ ನ್ಯಾಯಾಲಯಕ್ಕೆ ಮೇಲ್ಮನವಿಯನ್ನು ಅರ್ಜಿದಾರರು ಸಲ್ಲಿಸಿದ್ದು, ಮಾನ್ಯ ಸತ್ರ ನ್ಯಾಯಾಲಯವು ರೂ.60,000/- ಗಳಿಗೆ ಇಂಡೆಮ್ನಿಟಿ ಬಾಂಡ್ ಮತ್ತು 2 ಜಾಮೀನು ಪಡೆದು ವಾಹನವನ್ನು

ಮಾಲೀಕರ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲು ನೀಡಲಾದ ಆದೇಶದ ಅನ್ವಯ ಪ್ರಾಧಿಕಾರವು ದಿನಾಂಕ: 26.11.2002ರಂದು ವಾಹನವನ್ನು ವಾಹನ ಮಾಲೀಕರ ಮಧ್ಯಂತರ ವಶಕ್ಕೆ ನೀಡಿರುತ್ತದೆ.

ನಂತರ ಪ್ರಕರಣದ ವಿಚಾರಣೆಯನ್ನು ಆರಂಭಿಸಿ ಸರ್ಕಾರದ ಅಭಿಯೋಜನಾ ಪರವಾಗಿ 3 ಸಾಕ್ಷಿಗಳ ಹೇಳಿಕೆಯನ್ನು, ಪ್ರತಿರಕ್ಷಾ ಪರವಾಗಿ ವಾಹನ ಮಾಲೀಕರನ್ನು ವಿಚಾರಣೆಗೆ ಒಳಪಡಿಸಿ ಸಾಕ್ಷಿ ಹೇಳಿಕೆಯನ್ನು ಪಡೆಯಲಾಗಿದೆ. ಹಾಗೂ 6 ದಾಖಲೆಗಳನ್ನು ಗುರುತಿಸಲಾಗಿದೆ. ಈ ಪ್ರಕರಣದಲ್ಲಿ ಸರ್ಕಾರದ ಪರ ಹಾಗೂ ವಾಹನ ಮಾಲೀಕರ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಿಧಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು, ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತವೆ.

1) ದಿನಾಂಕ: 28.09.2001ರಂದು ವಾಹನ ಲಾರಿ ಸಂಖ್ಯೆ: ಸಿಟಿಎಸ್-7970ರಲ್ಲಿ ಅಕ್ರಮವಾಗಿ ಮದ್ಯವನ್ನು ಸಾಗಣೆ ಮಾಡಲಾಗಿತ್ತೇ?

2) ಅರ್ಜಿದಾರರು ವಾಹನ ಮಾಲೀಕ ತಾನೆಂದು ಮತ್ತು ತನಗೆ ತಿಳಿಯದೇ ಅಕ್ರಮ ಮದ್ಯ ಸಾಗಾಣಿಕೆಗೆ ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ಸಾಬೀತುಪಡಿಸಿದ್ದಾರೆಯೇ?

3) ಜಪ್ತುಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷ್ಯಾಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಹಾಗೂ ಮೂರನೇ ಅಂಶವನ್ನು ಅಂತಿಮ ಆದೇಶದಂತೆ ಪರಿಗಣಿಸಿದೆ.

**ಪ್ರಾ.ಸಾ.3:**

ಶ್ರೀ ಜಾರ್ಜ್ ಪಿಂಟೊ, ಅಬಕಾರಿ ನಿರೀಕ್ಷಕರು, ಮಂಗಳೂರು ಉಪ ವಿಭಾಗ ಇವರು ಈ ಪ್ರಕರಣದ ಫಿರ್ಯಾದುದಾರರಾಗಿದ್ದು, ದಿನಾಂಕ:09.10.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ತಾನು ದಿನಾಂಕ: 28.09.2001ರಂದು ಮಧ್ಯಾಹ್ನ 2.30 ಗಂಟೆಗೆ ಮಂಗಳೂರು ನಗರದ ಕೂಳೂರು ಜಂಕ್ಷನ್ ಬಳಿ ರಾಷ್ಟ್ರೀಯ ಹೆದ್ದಾರಿ 17ರ ಎಡಬದಿಯಲ್ಲಿರುವ ಅರುಣಾ ವೈನ್ಸ್ ಮುಂಭಾಗದಲ್ಲಿ ರಸ್ತೆಗಾವಲು ನಡೆಸುತ್ತಿರುವಾಗ ಮಂಗಳೂರು ಕಡೆಯಿಂದ ಉಡುಪಿ ಕಡೆಗೆ ಒಂದು ಎಲ್.ಪಿ. ಲಾರಿ ಬರುವುದು ಕಂಡು ಬಂದಿದ್ದು, ಸಂಶಯದ ಮೇಲೆ ಲಾರಿಯನ್ನು ತಡೆದು ನಿಲ್ಲಿಸಿದಾಗ ಲಾರಿಯಲ್ಲಿ ರಟ್ಟಿನ ಪೆಟ್ಟಿಗೆಗಳಿದ್ದು ಅದರ ಮೇಲೆ ಟಾರ್ಪಲ್ ಹೊದಿಕೆಯಿದ್ದು ಮದ್ಯದ ವಾಸನೆ ಬಂದ ಹಿನ್ನೆಲೆಯಲ್ಲಿ ವಾಹನ ಚಾಲಕನನ್ನು ವಿಚಾರಿಸಲಾಗಿ ಚಾಲಕನು ವಿವರಣೆ ನೀಡಲು ನಿರಾಕರಿಸಿದ್ದು, ಸಂಶಯದ ಮೇಲೆ ವಾಹನವನ್ನು ಶೋಧನೆ ಮಾಡಲು ಸ್ವತಂತ್ರ ಸಾಕ್ಷಿಗಳನ್ನು ಕರೆತರಲು ಸಿಬ್ಬಂದಿಯನ್ನು ಕಳುಹಿಸಿಕೊಡಲಾಗಿ, ಪರಿಸರದಲ್ಲಿದ್ದ ವ್ಯಕ್ತಿಗಳು ಸಾಕ್ಷಿಯಾಗಿ ಬರಲು ನಿರಾಕರಿಸಿದ್ದರಿಂದ ಇಲಾಖೆಯ ಸಿಬ್ಬಂದಿಯನ್ನೇ ಸಾಕ್ಷಿದಾರರನ್ನಾಗಿಸಿಕೊಂಡು ವಾಹನ ಶೋಧನೆ ಮಾಡಲು ಆರಂಭಿಸಿದಾಗ ಚಾಲಕ ಹಾಗೂ ಸಹ ಚಾಲಕನು ಜನಸಂದಣಿಯಲ್ಲಿ ಪರಾರಿಯಾದರು. ಸಿಬ್ಬಂದಿಯವರು ಹಿಂಬಾಲಿಸಿ ಅವರನ್ನು ಪತ್ತೆ ಹಚ್ಚಲು ಸಾಧ್ಯವಾಗದೇ ಇದ್ದು, ಸಿಬ್ಬಂದಿಯವರ ಸಮ್ಮುಖದಲ್ಲಿ ವಾಹನವನ್ನು ಶೋಧನೆ ಮಾಡಿದಾಗ ಲಾರಿ ಸಂಖ್ಯೆ: ಸಿಟಿಎಸ್-7970 (ಚಾಸೀಸ್ ನಂ.34052260290 ಹಾಗೂ ಇಂಜಿನ್ ನಂ.692 ಡಿಒ 2260016) ರಲ್ಲಿ 4494.960 ಲೀಟರ್ ತೆರಿಗೆ ರಹಿತ ಮದ್ಯ ಪತ್ತೆಯಾಗಿದ್ದು, ಸದ್ರಿ ಮದ್ಯದ ಬಗ್ಗೆ ಯಾವುದೇ ದಾಖಲಾತಿ ವಾಹನದಲ್ಲಿ ಇಲ್ಲದಿದ್ದು, ಈ ಬಗ್ಗೆ ವಿಚಾರಿಸಲು ವಾಹನ ಚಾಲಕ ಹಾಗೂ ಸಹ ಚಾಲಕನು ಪರಾರಿಯಾಗಿದ್ದರಿಂದ ಹಾಗೂ ಲಾರಿ ಮಾಲಿಕತ್ವದ ಬಗ್ಗೆ ಯಾರೂ ಮುಂದೆ ಬಾರದ ಪ್ರಯುಕ್ತ ಸದರಿ ತೆರಿಗೆ ರಹಿತ ಮದ್ಯವನ್ನು ಹಾಗೂ ಲಾರಿಯನ್ನು ಸರ್ಚ್ ಲಿಸ್ಟ್ ಮುಖಾಂತರ ಸರ್ಕಾರದ ವಶಕ್ಕೆ ತೆಗೆದುಕೊಂಡು, ಸದ್ರಿ ಮದ್ಯದಿಂದ ಪ್ರತಿ ಬ್ರಾಂಡ್‌ವಾರು ಮದ್ಯದಿಂದ 750 ಮಿಲಿಯ 4 ಬಾಟ್ಲಿ, 375 ಮಿಲಿಯ 5 ಬಾಟ್ಲಿ, 180 ಮಿಲಿಯ 5 ಬಾಟ್ಲಿಗಳನ್ನು ಪ್ರತ್ಯೇಕಿಸಿ, ಬಾಟ್ಲಿಗಳ ಬಾಯಿಯನ್ನು ಬಟ್ಟೆದಾರದಿಂದ ಕಟ್ಟಿ ಇಲಾಖಾ ಸೀಲ್‌ನಿಂದ ಸೀಲ್‌ಮಾಡಿ ಕ್ರೈಂ ನಂಬರ್ ಇರುವ ಗುರುತಿನ ಚೀಟಿಗಳನ್ನು ಅಂಟಿಸಲಾಯಿತು. ಸ್ಥಳದಲ್ಲಿ ಮಾದರಿ ಸೀಲನ್ನು, ಮಹಜರನ್ನು ತಯಾರಿಸಿ ಕಛೇರಿಗೆ ಬಂದು ಪ್ರಥಮ ಮಾಹಿತಿ ವರದಿಯನ್ನು ತಯಾರಿಸಿ ನ್ಯಾಯಾಲಯಕ್ಕೆ ಸಲ್ಲಿಸಲಾಯಿತು ಹಾಗೂ ಸಕ್ಷಮ್ಯ ಪ್ರಾಧಿಕಾರದ ಆದೇಶದ ಮೇರೆಗೆ ವಶಪಡಿಸಿದ ಮದ್ಯ ಹಾಗೂ ಲಾರಿಯನ್ನು ಕೂಳೂರು ವಲಯದ ಅಬಕಾರಿ ನಿರೀಕ್ಷಕರಿಗೆ ಮುಂದಿನ ತನಿಖೆಗಾಗಿ ಹಸ್ತಾಂತರ ಮಾಡಿರುವುದಾಗಿ ಸಾಕ್ಷಿ ನೀಡಿರುತ್ತಾರೆ. ಈ ಪ್ರಾಧಿಕಾರಕ್ಕೆ ಸಲ್ಲಿಸಿದ್ದ 43ರ ಅಡಿಯ ವರದಿಯನ್ನು ನೋಡಿ ಅದನ್ನು ನಿಶಾನೆ ಪಿ-4 ಎಂದು ಗುರುತಿಸಲಾಯಿತು. ಯಾದಾಸ್ತನ್ನು ನೋಡಿದೆನು. ಅದನ್ನು ನಿಶಾನೆ ಪಿ-3 ಎಂದು ಗುರುತಿಸಲಾಯಿತು. ಯಾದಾಸ್ತು ಸಮಯದಲ್ಲಿ ತಯಾರಿಸಲಾದ ಸರ್ಚ್ ಲಿಸ್ಟನ್ನು ನೋಡಿ ಅದನ್ನು ನಿಶಾನೆ ಪಿ-5 ಎಂದು ಗುರುತಿಸಲಾಯಿತು. ಈ ಪ್ರಕರಣದಲ್ಲಿ ನ್ಯಾಯಾಲಯದಿಂದ ವಾರಂಟ್ ಪಡೆಯಲು ಕಾಲಾವಕಾಶ ಇಲ್ಲದೇ ಇದ್ದುದರಿಂದ ಅದಕ್ಕೆ ಕಾರಣಗಳನ್ನು ನಮೂದಿಸಿ ವರದಿಯನ್ನು ಸಲ್ಲಿಸಿರುತ್ತೇನೆ. ನಿಶಾನೆ ಪಿ-5ರಲ್ಲಿ ಕುರಿತು ಕಾರಣಗಳನ್ನು ನಮೂದಿಸಲಾಗಿದೆ ಎಂದು ಸಾಕ್ಷಿ ನೀಡಿರುತ್ತಾರೆ. ಅರ್ಜಿದಾರರ ಪರ ವಕೀಲರು ಗೈರು ಹಾಜರಾಗಿದ್ದ ಕಾರಣ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಯಿತು.

**ಪ್ರಾ.ಸಾ:1**

ಶ್ರೀ ಚಂದ್ರಶೇಖರ್ ಈ ಪ್ರಕರಣದ ತನಿಖಾಧಿಕಾರಿಯಾಗಿದ್ದು, ದಿನಾಂಕ: 20.03.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ತಾನು ಮಂಗಳೂರು ಉಪ ವಿಭಾಗದ ಅಬಕಾರಿ ನಿರೀಕ್ಷಕರ ಪ್ರಥಮ ಮಾಹಿತಿ ವರದಿ ಸಂಖ್ಯೆ: 18/2001-02 ದಿನಾಂಕ:28.09.2001ರಂದು ಜಪ್ತು ಮಾಡಲ್ಪಟ್ಟ ಸಿಟಿಎಸ್-7970 ಸಂಖ್ಯೆಯ ಟಾಟಾ ಲಾರಿ, 505 ಪೆಟ್ಟಿಗೆಗಳಲ್ಲಿದ್ದ 4494.960 ಲೀಟರ್ ಮದ್ಯ ಹಾಗೂ 14 ಶೀಷೆ ಸ್ಯಾಂಪಲ್ ಬಾಟ್ಲಿಗಳನ್ನು ಹಾಗೂ ಸಂಬಂಧಿಸಿದ ಕಡತಗಳನ್ನು ದಿನಾಂಕ: 01.10.2001ರಂದು ಕೂಳೂರು ವಲಯ ಕಛೇರಿಗೆ ಹಸ್ತಾಂತರಿಸಿರುತ್ತಾರೆ. 14 ಸ್ಯಾಂಪಲ್ ಬಾಟ್ಲಿಗಳನ್ನು ಅಬಕಾರಿ ರಕ್ಷಕ ಶ್ರೀ ಗಣಪತಿ ಎಂಬುವವರ ಮೂಲಕ ಕೋರಿಕೆ ಪತ್ರದೊಂದಿಗೆ ರಾಸಾಯನಿಕ ತಜ್ಞರಿಗೆ ದಿನಾಂಕ: 16.10.2001ರಂದು ಕಳುಹಿಸಿಕೊಡಲಾಗಿದೆ. ದಿನಾಂಕ:20.01.2001ರಂದು ರಾಸಾಯನಿಕ ತಜ್ಞರ ವರದಿಯನ್ನು ಕಛೇರಿಗೆ ತಂದಿದ್ದು, ದಿನಾಂಕ: 23.11.2001ರಂದು ಸದ್ರಿ ವರದಿಯನ್ನು ಪ್ರಾಧಿಕಾರಕ್ಕೆ ಸಲ್ಲಿಸಲಾಗಿದೆ. ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಲು ಬಾಕಿ ಇರುತ್ತದೆ. ಈ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ಟಾಟಾ ಲಾರಿ ಸಂಖ್ಯೆ: ಸಿಟಿಎಸ್-7970 ಇದರ ಮಾಲೀಕರು ಗೋಪಾಲಕೃಷ್ಣ ನಾಯಕ್ ಎಂಬುವವರು ಎಂದು ತಿಳಿಯಿತು. ರಾಸಾಯನಿಕ ವಿಶ್ಲೇಷಕರ ಅಭಿಪ್ರಾಯದಂತೆ ವಶಪಡಿಸಿಕೊಂಡ ಮದ್ಯವು ಮಾನವ ಸೇವನೆಗೆ ಯೋಗ್ಯವಾಗಿದೆ ಎಂದು ಅಭಿಪ್ರಾಯ ಕೊಟ್ಟಿರುತ್ತಾರೆ. ರಾಸಾಯನಿಕ ವರದಿಯ ಛಾಯಾ ಪ್ರತಿಯನ್ನು ನೋಡಿದೆನು. ಅದನ್ನು ನಿಶಾನೆ ಪಿ-1 ಎಂದು ಗುರುತಿಸಲಾಯಿತು. ಈ ಪ್ರಕರಣದ ಪ್ರಥಮ ಮಾಹಿತಿ ವರದಿ ಹಾಗೂ ಯಾದಾಸ್ತಿನ ಪ್ರತಿಯನ್ನು ನೋಡಿ ಅವುಗಳನ್ನು ಕ್ರಮವಾಗಿ ನಿಶಾನೆ ಪಿ-2 ಮತ್ತು ನಿಶಾನೆ ಪಿ-3 ಎಂದು ಗುರುತಿಸಲಾಯಿತು.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ಸದ್ರಿ ತಕ್ಷೀರಿನಲ್ಲಿ ವಾಹನ ಮಾಲೀಕರು ಶಾಮೀಲಾಗಿದ್ದಾರೆ ಎಂದು ಹೇಳಲು ಯಾವುದೇ ಸಾಕ್ಷ್ಯಾಧಾರವಿಲ್ಲ ಎಂದು ಸಾಕ್ಷಿಯನ್ನು ನೀಡಿರುತ್ತಾರೆ.

**ಪ್ರಾ.ಸಾ:2**

ಶ್ರೀ ಸಿ.ಹೆಚ್. ಗಣಪತಿ, ಅಬಕಾರಿ ರಕ್ಷಕ ಇವರು ದಿನಾಂಕ: 20.03.2003ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತನ್ನ ಸಾಕ್ಷಿಯನ್ನು ನೀಡಿರುತ್ತಾರೆ. ತಾನು ಈ ಪ್ರಕರಣದಲ್ಲಿ ದಿನಾಂಕ: 16.10.2001ರಂದು ಒಟ್ಟು 14 ಬಾಟ್ಲಿ ಮತ್ತು ಕೋರಿಕೆ ಪತ್ರವನ್ನು, ಮಾದರಿ ಸೀಲನ್ನು ಮಂಗಳೂರು ರಾಸಾಯನಿಕ ತಜ್ಞರಿಗೆ ಕೊಟ್ಟೆನು. ದಿನಾಂಕ: 20.11.2001ರಂದು ಪರಿಶೀಲಿಸಿದ ಮಾದರಿ ಶೀಷೆಗಳನ್ನು ವರದಿಯೊಂದಿಗೆ ಅಬಕಾರಿ ಉಪ ನಿರೀಕ್ಷಕರಿಗೆ ತಲುಪಿಸಿದೆನು ಎಂದು ಸಾಕ್ಷಿ ನೀಡಿರುತ್ತಾರೆ.

ಪ್ರಾ.ಸಾ.1,2 ಮತ್ತು 3 ಇವರ ಸಾಕ್ಷಿ ಹೇಳಿಕೆಯು ಪೂರಕವಾಗಿದ್ದು ಹಾಗೂ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿನಾಂಕ:28.09.2001ರಂದು ವಾಹನ ಲಾರಿ ಸಂಖ್ಯೆ: ಸಿಟಿಎಸ್-7970ರಲ್ಲಿ 505 ಪೆಟ್ಟಿಗೆ ಮದ್ಯವನ್ನು ಸಾಗಣೆ ಮಾಡಲಾಗಿದೆ ಎಂದು ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಮೊದಲನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

**ಡಿ.ಡಬ್ಲ್ಯೂ-1**

ಶ್ರೀ ಗೋಪಾಲಕೃಷ್ಣ ನಾಯ್ಕ ಇವರು ಈ ಪ್ರಕರಣದ ಪ್ರತಿರಕ್ಷಾ ಸಾಕ್ಷಿಯಾಗಿ ದಿನಾಂಕ: 25.03.2004ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ತಾನು ಈ ಕೇಸಿನಲ್ಲಿ ಅರ್ಜಿದಾರ ಎಂದು, ಈ ಪ್ರಕರಣದಲ್ಲಿ ವಶಪಡಿಸಿರುವ ಲಾರಿ ಸಂಖ್ಯೆ: ಸಿಟಿಎಸ್-7970ರ ನೋಂದಣಿ ಮಾಲೀಕನೆಂದೂ, ತಾನು ಕೆ.ಎಸ್.ಆರ್.ಟಿ.ಸಿ. ಸಂಸ್ಥೆಯಲ್ಲಿ ಸಹಾಯಕ ಟ್ರಾಫಿಕ್ ಇನ್ಸ್‌ಪೆಕ್ಟರ್‌ರಾಗಿ ಕೆಲಸ ಮಾಡುತ್ತಿದ್ದು ಸದ್ರಿ ವಾಹನವನ್ನು ಜೀವನಾಧಾರಕ್ಕಾಗಿ ಖರೀದಿ ಮಾಡಿರುತ್ತೇನೆಂದು ತಿಳಿಸುತ್ತಾ, ತನಗೆ ವಾಹನ ಚಲಿಸಲು ಗೊತ್ತಿಲ್ಲವೆಂದು ವಾಹನವನ್ನು ಬಾಡಿಗೆಗೆ ವಸ್ತುಗಳನ್ನು ಸಾಗಿಸಲು ಉಪಯೋಗಿಸುತ್ತಿದ್ದೆ. ಇದಲ್ಲದೆ ಬೇರೆ ವಾಹನ ಇಲ್ಲ, ನಿವೃತ್ತಿಯಿಂದ ಬಂದ ಹಣದಿಂದ ಹಾಗೂ ಸ್ವಲ್ಪ ಹಣವನ್ನು ಸಾಲವಾಗಿ ಪಡೆದು ಲಾರಿಯನ್ನು ಖರೀದಿಸಿರುತ್ತೇನೆಂದೂ, ಗಿರೀಶ್ ಎಂಬ ವ್ಯಕ್ತಿಯನ್ನು ಚಾಲಕನಾಗಿ ನೇಮಿಸಿಕೊಂಡಿದ್ದು ಈ ಘಟನೆ ನಡೆಯುವ ಮೊದಲು ಒಂದೂವರೆ ವರ್ಷದಿಂದ ಕೆಲಸ ಮಾಡುತ್ತಿದ್ದಾರೆಂದೂ, ಅವರನ್ನು ನೇಮಿಸಿಕೊಳ್ಳುವ ಪೂರ್ವದಲ್ಲಿ ಅವರ ಪೂರ್ವಾಭಾವಿ ವಿಷಯಗಳನ್ನು ಪರಿಶೀಲಿಸಿ ನೇಮಕ ಮಾಡಿಕೊಂಡಿರುತ್ತೇನೆಂದೂ, ನೇಮಿಸಿಕೊಳ್ಳುವಾಗ ಯಾವುದೇ ಕಾನೂನು ಬಾಹಿರ ಸಾಗಣೆಗಾಗಿ ವಾಹನವನ್ನು ಉಪಯೋಗಿಸಬಾರದೆಂದು ತಿಳಿಸಿದ್ದು, ಚಾಲಕನಿಗೆ ತಿಂಗಳಿಗೆ ರೂ.1,500/- ಸಂಬಳ ಹಾಗೂ ರೂ.75/-ನ್ನು ದಿನಭತ್ಯೆಯಾಗಿ ನೀಡುತ್ತಿರುವುದಾಗಿ ತಿಳಿಸುತ್ತಾ ವಾಹನವನ್ನು ನಮ್ಮ ಮನೆಯ ಪಕ್ಕದ ಗ್ಯಾರೇಜಿನಲ್ಲಿ ಇಡುತ್ತಿದ್ದುದಾಗಿ, ಹೆಚ್ಚಿನದಾಗಿ ಸ್ಥಳೀಯ ಸಾಗಾಣಿಕೆ ಮಾಡುತ್ತಿದ್ದನು. ಬೆಳಿಗ್ಗೆ ಹೋಗಿ ಸಂಜೆ ಬರುತ್ತಿದ್ದನು ಎಂದು ತಿಳಿಸಿರುತ್ತಾರೆ.

ದಿನಾಂಕ: 28.09.2001ರಂದು ಹಾಸನಕ್ಕೆ ಬೆಳಿಗ್ಗೆ 5.00 ಗಂಟೆಗೆ ತರಕಾರಿ ತರಲು ಹೊರಟಿತ್ತು. ಸದ್ರಿ ದಿನ ವಾಹನವು ಮಂಗಳೂರಿಗೆ ಬರಲಿಲ್ಲ. ವಿಚಾರ ಮಾಡುವಾಗ ಲಾರಿಯನ್ನು ಕೂಳೂರಿನಲ್ಲಿ ಅಬಕಾರಿ ಅಧಿಕಾರಿಗಳು ಹಿಡಿದಿರುತ್ತಾರೆಂದು ಗೊತ್ತಾಯಿತು. ಅಬಕಾರಿ ಕಾರ್ಯಾಲಯದಲ್ಲಿ ವಿಚಾರಿಸಲಾಗಿ ವಾಹನದಲ್ಲಿ ಅನಧಿಕೃತವಾಗಿ ಮದ್ಯವನ್ನು ಸಾಗಾಟ ಮಾಡಲು ಉಪಯೋಗಿಸಿದ್ದಕ್ಕಾಗಿ ವಶಪಡಿಸಿಕೊಂಡಿರುತ್ತಾರೆಂದು ತಿಳಿಸಿರುತ್ತಾರೆ. ನಾನು ಮದ್ಯ ಸಾಗಣೆಯಲ್ಲಿ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಭಾಗಿಯಾಗಿಲ್ಲ. ಅಬಕಾರಿ ಅಧಿಕಾರಿಗಳು ಸುಳ್ಳು ಪ್ರಕರಣವನ್ನು ದಾಖಲಿಸಿದ್ದಾರೆ. ದಿನಾಂಕ: 28.09.2001 ರಂದು ನನ್ನ ವಾಹನದಲ್ಲಿ ತರಕಾರಿ ಲೋಡ್ ಆದ ಬಗ್ಗೆ ಹಾಸನದ ಏಜೆಂಟ್ ಹಾಗೂ ಮಂಗಳೂರಿನ ಏಜೆಂಟರಲ್ಲಿ ವಿಚಾರ ಮಾಡಿರುತ್ತೇನೆ. ನಾನು ಲಾರಿಯನ್ನು ವಶಪಡಿಸಿಕೊಂಡ 5 ದಿನಗಳ ನಂತರ ಹಾಸನದ ಏಜೆಂಟರನ್ನು ವಿಚಾರಿಸಿರುತ್ತೇನೆ. ದಿನಾಂಕ:28.09.2001ರಂದು ತರಕಾರಿಯನ್ನು ಹಾಸನದಿಂದ ಮಂಗಳೂರಿಗೆ ತಂದ ಬಗ್ಗೆ ಹಾಸನದ ಏಜೆಂಟರಲ್ಲಿ ದಾಖಲೆ ಇದ್ದು, ಅದನ್ನು ಪ್ರಾಧಿಕಾರದ ಮುಂದೆ ಹಾಜರುಪಡಿಸಿರುತ್ತೇನೆ. ಸದ್ರಿ ದಾಖಲೆಯು ಡೆಲಿವರಿ ನೋಟ್ ಇದ್ದು ಅದನ್ನು ಶ್ರೀಧರ ಗೌಡ ಇವರು ನೀಡಿರುತ್ತಾರೆ. ಸದ್ರಿ ದಾಖಲೆಯನ್ನು ಮಂಗಳೂರಿನ ಅಬಕಾರಿ ಅಧಿಕಾರಿಗಳಿಗೆ ನಂತರ ತೋರಿಸಿರುತ್ತೇನೆ. ನಾನು ಈ ಪ್ರಕರಣದಲ್ಲಿ ಯಾವುದೇ ಅಪರಾಧ ಮಾಡಿಲ್ಲವೆಂದು, ವಾಹನವನ್ನು ನನಗೆ ಬಿಟ್ಟುಕೊಡಬೇಕೆಂದು ಕೇಳಿರುತ್ತಾರೆ. ಈ ಪ್ರಕರಣದಲ್ಲಿ ನಾನಾಗಲೀ, ನನ್ನ ಚಾಲಕನಾಗಲಿ ಅನಧಿಕೃತ ಮದ್ಯ ಸಾಗಣೆಯಲ್ಲಿ ಭಾಗಿಯಾಗಿರುವುದಿಲ್ಲ. ನನ್ನ ಮೇಲೆ ಯಾವುದೇ ಕ್ರಿಮಿನಲ್ ಮೊಕದ್ದಮೆಗಳು ಇರುವುದಿಲ್ಲ. ಈಗಲೂ ವಾಹನವನ್ನು ಕಾನೂನು ರೀತಿಯಲ್ಲಿ ಸಾಗಾಟ ಮಾಡಲು ಉಪಯೋಗಿಸುತ್ತಿದ್ದೇನೆ. ಈ ಕಾರಣದಿಂದ ವಾಹನವನ್ನು ಬಿಟ್ಟುಕೊಡುವಂತೆ ಕೋರುತ್ತೇನೆ ಎಂದು ಸಾಕ್ಷಿ ನೀಡಿರುತ್ತಾರೆ.

ಮಾನ್ಯ ಸಹಾಯಕ ಅಭಿಯೋಜನ ನಿರ್ದೇಶಕರ ಪಾಟೀ ಸವಾಲಿಗೆ ಉತ್ತರಿಸುತ್ತಾ, ಈ ಮೊದಲು ನನಗೆ ಅಬಕಾರಿ ಅಧಿಕಾರಿಗಳ ಸಂಪರ್ಕವಿಲ್ಲ. ಅಬಕಾರಿ ಇಲಾಖೆಯವರಿಗೆ ನನ್ನ ಮೇಲೆ ಯಾವುದೇ ದ್ವೇಷವಿರಲಿಲ್ಲ. ಈ ಪ್ರಕರಣದಲ್ಲಿ ನಿಶಾನೆ ಡಿ-1ನ್ನು ಈ ಪ್ರಕರಣಕ್ಕಾಗಿ ಸೃಷ್ಟಿ ಮಾಡಿದ್ದು ಎಂದರೆ ಸರಿಯಲ್ಲ. ಈಗ ನಮ್ಮ ವಾಹನಕ್ಕೆ ಹರೀಶ್ ಎಂಬ ಚಾಲಕನಿದ್ದಾನೆ. ಈ ಮೊದಲು ಇದ್ದ ಗಿರೀಶ್ ಈ ಪ್ರಕರಣದ ನಂತರ ನನ್ನಲ್ಲಿಗೆ ಬರಲಿಲ್ಲ. ಸದ್ರಿಯವನು ಮಡಿಕೇರಿಯಲ್ಲಿದ್ದಾನೆಂದು ಗೊತ್ತಾಯಿತು. ದಿನಾಂಕ:28.09.2001ರಂದು ನಮ್ಮ ವಾಹನದಲ್ಲಿ ಮದ್ಯದ ಪೆಟ್ಟಿಗೆಗಳನ್ನು ಸಾಗಿಸುತ್ತಾರೆ ಎಂಬ ಕಾರಣದಿಂದ ವಾಹನವನ್ನು ವಶಪಡಿಸಿಕೊಂಡಿರುತ್ತಾರೆ ಎಂದರೆ ಸರಿ. ನಮ್ಮ ವಾಹನವನ್ನು ಅಬಕಾರಿ ಅಧಿಕಾರಿಗಳು ವಶಪಡಿಸಿಕೊಂಡ ನಂತರ ಆತನು ತನಗೆ ಸಿಕ್ಕಿಲ್ಲ. ಇದುವರೆಗೆ ಚಾಲಕನು ನನ್ನನ್ನು ಭೇಟಿಯಾಗಿಲ್ಲ. ನಮ್ಮ ಲಾರಿಯನ್ನು ಅಬಕಾರಿ ಅಧಿಕಾರಿಗಳು ವಶಪಡಿಸಿಕೊಂಡ ನಂತರ ಚಾಲಕನು ಮಡಿಕೇರಿಗೆ ಹೇಳದೇ ಹೋಗಿದ್ದು ಏಕೆ ಎಂಬ ಬಗ್ಗೆ ವಿಚಾರಣೆ ಮಾಡಿಲ್ಲ. ದಿನಾಂಕ: 28.09.2001ರಂದು ನನ್ನ ವಾಹನದಲ್ಲಿ ಮದ್ಯ ಸಾಗಣೆ ಮಾಡುವ ವಿಷಯ ನನಗೆ ತಿಳಿದಿತ್ತು ಎಂದರೆ ಸರಿಯಲ್ಲ. ನಾನು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆಂದರೆ ಸರಿಯಲ್ಲ ಎಂದು ಸಾಕ್ಷಿ ನೀಡಿರುತ್ತಾರೆ.

ಸದ್ರಿ ಅಪರಾಧವು ತನ್ನ ತಿಳುವಳಿಕೆಗೆ ಬಾರದೆ ನಡೆದಿದೆಯೆಂದು ಸಾಬೀತು ಪಡಿಸುವುದು ವಾಹನದ ಮಾಲೀಕರ ಜವಾಬ್ದಾರಿಯಾಗಿದ್ದು, ಡಿಡಬ್ಲ್ಯೂ-1 ಇವರ ಸಾಕ್ಷಿ ಹೇಳಿಕೆಗಳನ್ನು ಗಮನಿಸಲಾಗಿ ಅಕ್ರಮ ಮದ್ಯ ಸಾಗಣೆಯಾಗದಂತೆ ಯಾವುದೇ ಮುನ್ನೆಚ್ಚರಿಕೆ ಕ್ರಮ ಕೈಗೊಂಡಿರುವುದಿಲ್ಲ. ತಮ್ಮ ಹೇಳಿಕೆಯಲ್ಲಿ ಲಾರಿಯನ್ನು ಸ್ಥಳೀಯ ಸಾಗಣೆಗೆ ಮಾತ್ರ ಬಳಸಲಾಗುತ್ತಿತ್ತು ಎಂದು ತಿಳಿಸಿದ್ದು, ದಿನಾಂಕ:28.09.2001ರಂದು ವಾಹನವು ಜಪ್ತಾದ ದಿನ ಬೆಳಿಗ್ಗೆ 5.00 ಗಂಟೆಗೆ ತರಕಾರಿಯನ್ನು ಹಾಸನದಿಂದ ಮಂಗಳೂರಿಗೆ ಸಾಗಣೆ ಮಾಡಲು ಹೊರಟಿರುತ್ತದೆ ಎಂದು ಹೇಳಿಕೆ ನೀಡಿರುತ್ತಾರೆ. ಲಾರಿಯನ್ನು ಜಪ್ತು ಪಡಿಸಿದ 5 ದಿನಗಳ ನಂತರ ಹಾಸನಕ್ಕೆ ಹೋಗಿ ಏಜೆಂಟರಲ್ಲಿ ವಿಚಾರಿಸಿರುತ್ತೇನೆ ಎಂದು, ದಿನಾಂಕ:28.09.2001 ರಂದು ಹಾಸನದಿಂದ ಮಂಗಳೂರಿಗೆ ತರಕಾರಿ ಸಾಗಣೆ ಮಾಡಲು ನೀಡಿದ ಎನ್ನಲಾದ ಡೆಲಿವರಿ ನೋಟ್ ಪ್ರತಿಯನ್ನು ಸೃಷ್ಟಿಸಿ ಪ್ರಾಧಿಕಾರದ ಮುಂದೆ ಹಾಜರುಪಡಿಸಿರುತ್ತಾರೆ. ಮಂಗಳೂರಿನಿಂದ ತರಕಾರಿಯನ್ನು ಸಾಗಿಸಲು ಡೆಲಿವರಿ ನೋಟನ್ನು ಶ್ರೀಧರ ಗೌಡ ಎಂಬುವರು ನೀಡಿರುತ್ತಾರೆ ಎಂದು ತಿಳಿಸಿರುತ್ತಾರೆ. ಆದರೆ ದಿನಾಂಕ: 28.09.2001ರಂದು ಅಬಕಾರಿ ಅಧಿಕಾರಿಗಳು ಲಾರಿಯನ್ನು ತಪಾಸಣೆ ಮಾಡುವಲ್ಲಿ ತರಕಾರಿಯಿಲ್ಲದೆ ಸದ್ರಿ ಡೆಲಿವರಿ

ನೋಟ್‌ನ ಮೂಲ ಪ್ರತಿಯನ್ನು ಹಾಜರುಪಡಿಸದೇ ಲಾರಿಯಲ್ಲಿ 505 ಪೆಟ್ಟಿಗೆ ಅಕ್ರಮ ಮದ್ಯವನ್ನು ಸಾಗಣೆ ಮಾಡಿದ್ದು, ಶೋಧನಾ ವೇಳೆಯಲ್ಲಿ ಲಾರಿಯ ಚಾಲಕನು ಮತ್ತು ಸಹ ಚಾಲಕನು ತಕ್ಷೀರು ಸ್ಥಳದಿಂದ ತಲೆಮರೆಸಿಕೊಂಡು ಪರಾರಿಯಾಗಿರುತ್ತಾರೆ. ಈ ಕಾರಣದಿಂದ ಲಾರಿಯಲ್ಲಿ ಅಕ್ರಮ ಮದ್ಯ ಸಾಗಣೆಯಾಗಿರುವುದು ನಿಸ್ಸಂದೇಹವಾಗಿ ದೃಢಪಟ್ಟಿರುತ್ತದೆ. ಈ ಪ್ರಮಾಣದ ಬೆಲೆಬಾಳುವ ಅಕ್ರಮ ಮದ್ಯವನ್ನು ವಾಹನ ಮಾಲೀಕರ ತಿಳುವಳಿಕೆಗೆ ಬಾರದೇ ಸಾಗಾಟ ಮಾಡುವುದು ನಂಬಿಕೆಗೆ ಅಸಾಧ್ಯವಾದ ಸಂಗತಿಯಾಗಿರುತ್ತದೆ. ಈ ನಿಟ್ಟಿನಲ್ಲಿ ವಾಹನ ಮಾಲೀಕರು ಈ ಅಕ್ರಮ ಸಾಗಣೆ ತನ್ನ ತಿಳುವಳಿಕೆಗೆ ಬಾರದೇ ನಡೆದಿದೆ ಎಂದು ಸಾಬೀತು ಪಡಿಸಲು ವಿಫಲರಾಗಿರುತ್ತಾರೆ. ಆದುದರಿಂದ ಎರಡನೇ ವಿವಿಧಾಂಶಕ್ಕೆ ಉತ್ತರವನ್ನು ನಕಾರಾತ್ಮಕವಾಗಿ ಪರಿಗಣಿಸಲಾಗಿದೆ.

ಈ ಮೇಲಿನ ಎಲ್ಲಾ ಕಾರಣಗಳಿಂದ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ: 133: ಡಿಟಿಸಿಆರ್:2001-2002, ದಿನಾಂಕ: 18ನೇ ನವೆಂಬರ್, 2004**

ಗೋವಿಂದಪ್ಪ, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು 1965ನೇ ಕರ್ನಾಟಕ ಅಬಕಾರಿ ಅಧಿನಿಯಮ ಕಲಂ 43(ಎ)ರ ಅಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಅಬಕಾರಿ ನಿರೀಕ್ಷಕರು, ಮಂಗಳೂರು ಉಪ ವಿಭಾಗ ಇವರ ಮೊಕದ್ದಮೆ ಸಂಖ್ಯೆ: 18/2001-02 ದಿನಾಂಕ: 28.09.2001ರಲ್ಲಿ ಜಪ್ತುಪಡಿಸಿರುವ ವಾಹನ ಟಾಟಾ ಲಾರಿ ಸಂಖ್ಯೆ: ಸಿಟಿಎಸ್-7970ನ್ನು ನಿಯಮ 43ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 18.11.2004ರಂದು ಶೀಘ್ರಲಿಪಿಗಾರರಿಗೆ ಉತ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ-1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ.:1- ಶ್ರೀ ಚಂದ್ರಶೇಖರ, ಅಬಕಾರಿ ನಿರೀಕ್ಷಕರು, ಕೂಳೂರು ವಲಯ.
ಪ್ರಾ.ಸಾ.:2- ಶ್ರೀ ಸಿ.ಹೆಚ್. ಗಣಪತಿ, ಅಬಕಾರಿ ರಕ್ಷಕ, ಕೂಳೂರು ವಲಯ.
ಪ್ರಾ.ಸಾ.:3- ಶ್ರೀ ಜಾರ್ಜ್ ಪಿಂಟೊ, ಅಬಕಾರಿ ನಿರೀಕ್ಷಕರು, ಮಂಗಳೂರು ಉಪ ವಿಭಾಗ, ಮಂಗಳೂರು.

**ಅನುಬಂಧ-2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ ಪಿ-1 - ರಾಸಾಯನಿಕ ವಿಶ್ಲೇಷಕರ ವರದಿ ಪ್ರತಿ.
ನಿಶಾನೆ ಪಿ-2 -ಪ್ರಥಮ ಮಾಹಿತಿ ವರದಿಯ ಪ್ರತಿ.
ನಿಶಾನೆ ಪಿ-3- ಯಾದಾಸ್ತಿನ ಪ್ರತಿ.
ನಿಶಾನೆ ಪಿ-4 - ಅಧಿಕೃತ ಅಧಿಕಾರಿಯವರಿಗೆ ಸಲ್ಲಿಸಲಾಗಿದ್ದ ವರದಿಯ ಪ್ರತಿ.
ನಿಶಾನೆ ಪಿ-5- ಸರ್ಚ್ ಲಿಸ್ಟ್.

**ಅನುಬಂಧ-3**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:**

ಡಿ.ಡಬ್ಲ್ಯೂ-1: ಶ್ರೀ ಕೆ. ಗೋಪಾಲಕೃಷ್ಣ ನಾಯ್ಕ್, ಬಿನ್: ಲೇಟ್ ಎಂ. ವೆಂಕಟೇಶ್ ನಾಯಕ್, ಡೋರ್ ನಂ. 9:65, ಅಳಪೆ ಪಡೀಲ್, ಮಂಗಳೂರು.

**ಅನುಬಂಧ-4**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು:**

-ಯಾವುದೂ ಇರುವುದಿಲ್ಲ.

ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್. 1659

## DEPARTMENT OF COMMERCIAL TAXES

**Office of the Commissioner of Commercial Taxes in Karnataka, Gandhinagar, Bangalore-560009**

**NOTIFICATION**

**No. KSA.CR 244/04-05, Date: 23rd November, 2004**

In exercise of the powers conferred on me by the proviso to sub-section (2) of Section 28-A of the Karnataka Sales Tax Act, 1957 (Karnataka Act 25 of 1957), I, Ashok Kumar C. Manoli, Commissioner of Commercial Taxes, Karnataka, do hereby notify that 'Arecanut' is excluded for the purpose of the said proviso.

**ASHOK KUMAR C. MANOLI**
Commissioner of Commercial Taxes,
(Karnataka), Bangalore.

PR-1670

**ತಹಸೀಲ್ದಾರ್‌ರವರ ಕಾರ್ಯಾಲಯ, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಉಪನಗರ**

**ನಮೂನೆ-27**

**ಭೂ ಕಂದಾಯ ಅಧಿನಿಯಮ 68(1)ನೇ ಪ್ರಕರಣದ ಮೇರೆಗೆ ಘೋಷಣೆ**

**ಸಂಖ್ಯೆ: ಎಲ್.ಎನ್.ಡಿ.ಸಿ.ಆರ್. 39:99-2000**

ಈ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಯಲಹಂಕ ಹೋಬಳಿ, ಅಮಾನಿಕೆರೆ ಸರ್ವೆ ನಂ. 55ರ ಪೈಕಿ 41-00 ಎಕರೆ ಜಮೀನನ್ನು ಕಾವೇರಿ 4ನೇ ಹಂತದ ಯೋಜನೆಯಡಿಯಲ್ಲಿ ಬೆಂಗಳೂರು ಜಲಮಂಡಳಿ ಕೊಳಚೆ ನೀರು ಶುದ್ಧೀಕರಣ ಕಾರ್ಯಾಗಾರ ನಿರ್ಮಾಣ ಮಾಡಲು ಸದರಿ ಜಮೀನನ್ನು ಜಲಮಂಡಳಿಗೆ ವರ್ಗಾವಣೆ ಮಾಡಲು ಪ್ರಶ್ನಿತ ಜಮೀನು ಕೆರೆ ನೀರು ಮುಳುಗಡೆ ಜಮೀನಾಗಿದ್ದು, ರಾಜ್ಯ ಸರ್ಕಾರಕ್ಕೆ ಕಂಡು ಬಂದಿರುವುದರಿಂದ ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ 68ನೇ ಪ್ರಕರಣ (1)ನೇ ಉಪ ಪ್ರಕರಣದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಕೆರೆ ನೀರು ಮುಳುಗಡೆ ಜಮೀನಾದ್ದರಿಂದ ಕೊಳಚೆ ನೀರು ಶುದ್ಧೀಕರಣ ಕಾರ್ಯಾಗಾರ ನಿರ್ಮಾಣ ಮಾಡುವ ಸಲುವಾಗಿ ಜಲಮಂಡಳಿಗೆ ನೀಡುತ್ತಿದ್ದು, ಸಾರ್ವಜನಿಕ ಹಾಗೂ ಎಲ್ಲಾ ವ್ಯಕ್ತಿಗಳು ಕೊನೆಗೊಳ್ಳುವುದೆಂದು ಉದ್ದೇಶಿಸಿ ಈ ಮೂಲಕ ಘೋಷಿಸಿರುತ್ತೆ.

ಈ ರೀತಿ ಸದರಿ ಜಮೀನನ್ನು ಕಾವೇರಿ 4ನೇ ಹಂತದ ಯೋಜನೆಯಡಿಯಲ್ಲಿ ಬೆಂಗಳೂರು ಜಲಮಂಡಳಿಗೆ ಕೊಳಚೆ ನೀರು ಶುದ್ಧೀಕರಣ ಕಾರ್ಯಾಗಾರ ನಿರ್ಮಾಣ ಮಾಡುವ ಸಲುವಾಗಿ ವರ್ಗಾವಣೆ ಮಾಡುತ್ತಿದ್ದು, ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೆ ಒಳಗಾಗುವ ಯಾವುದೇ ವ್ಯಕ್ತಿ, ಸಂಘ ಸಂಸ್ಥೆ ಈ ಅಧಿಸೂಚನೆಯನ್ನು ಹೊರಡಿಸಿದ 90 ದಿನಗಳ ಒಳಗಾಗಿ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು ಅಂತಹ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲದ ಪರಿಣಾಮದ ರೀತಿಯನ್ನು ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ತಿಳಿಸತಕ್ಕದ್ದು.

**ಅನುಸೂಚಿ**

ಜಿಲ್ಲೆ: ಬೆಂಗಳೂರು ತಾಲ್ಲೂಕು: ಬೆಂಗಳೂರು ಉತ್ತರ (ಅಪರ) ತಾಲ್ಲೂಕು

ಹೋಬಳಿ: ಯಲಹಂಕ ಸರ್ವೆ ನಂ.55, ವಿಸ್ತೀರ್ಣ:41-00 ಎಕರೆ

**ಈ ಜಮೀನಿನ ಚೆಕ್ಕುಬಂದಿ:**

ಪೂರ್ವಕ್ಕೆ: ಸ.ನಂ.56 ಹಾಗೂ ಗಸ್ತಿಕೆಂಪನಹಳ್ಳಿಗಡಿ

ಪಶ್ಚಿಮಕ್ಕೆ: ಸ.ನಂ.50, 51, 52, 53, 54ರ ಜಮೀನು

ಉತ್ತರಕ್ಕೆ: ಕಸಬಾ ಯಲಹಂಕ ಜಮೀನು

ದಕ್ಷಿಣಕ್ಕೆ: ಸ.ನಂ.55ರ ಜಮೀನು.

**ಸಿ. ಗಂಗಾಧರಯ್ಯ**

ಪಿ.ಆರ್. 1664

ತಹಸೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು
(ಅಪರ) ಯಲಹಂಕ ಉಪನಗರ.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ**

**ಅಧಿಸೂಚನೆ-I**

**ಸಂಖ್ಯೆ: ಸಿಆಸುಇ 15 ಹೆಚ್‌ಹೆಚ್‌ಎಲ್ 2004, ಬೆಂಗಳೂರು, ದಿನಾಂಕ: 1ನೇ ಡಿಸೆಂಬರ್, 2004**

ಸರ್ಕಾರವು 2005ನೇ ವರ್ಷಕ್ಕೆ ಮಂಜೂರು ಮಾಡಿರುವ ಸಾರ್ವತ್ರಿಕ ರಜಾ ದಿನಗಳ ಪಟ್ಟಿಯನ್ನು ಸಾರ್ವಜನಿಕ ಮಾಹಿತಿಗಾಗಿ ಈ ಕೆಳಕಂಡಂತೆ ಪ್ರಕಟಿಸಲಾಗಿದೆ.

**ಎಲ್ಲಾ ಎರಡನೇ ಶನಿವಾರಗಳು ಮತ್ತು ಭಾನುವಾರಗಳು ಹಾಗೂ:**

| ಕ್ರಮ ಸಂಖ್ಯೆ | ದಿನಾಂಕ | ವಾರಗಳು | ಸಾರ್ವತ್ರಿಕ ರಜಾ ದಿನಗಳು |
|---|---|---|---|
| 1. | 14.01.2005 | ಶುಕ್ರವಾರ | ಉತ್ತರಾಯಣ ಪುಣ್ಯಕಾಲ, ಸಂಕ್ರಾಂತಿ ಹಬ್ಬ |
| 2. | 21.01.2005 | ಶುಕ್ರವಾರ | ಬಕ್ರೀದ್ |
| 3. | 26.01.2005 | ಬುಧವಾರ | ಗಣ ರಾಜ್ಯೋತ್ಸವ |
| 4. | 08.03.2005 | ಮಂಗಳವಾರ | ಮಹಾ ಶಿವರಾತ್ರಿ |
| 5. | 25.03.2005 | ಶುಕ್ರವಾರ | ಗುಡ್‌ಫ್ರೈಡೇ |
| 6. | 14.04.2005 | ಗುರುವಾರ | ಡಾ. ಅಂಬೇಡ್ಕರ್ ಜಯಂತಿ |
| 7. | 22.04.2005 | ಶುಕ್ರವಾರ | ಮಹಾವೀರ ಜಯಂತಿ ಹಾಗೂ ಈದ್ ಮಿಲಾದ್ |
| 8. | 11.05.2005 | ಬುಧವಾರ | ಬಸವೇಶ್ವರ ಜಯಂತಿ |
| 9. | 15.08.2005 | ಸೋಮವಾರ | ಸ್ವಾತಂತ್ರ್ಯ ದಿನಾಚರಣೆ |
| 10. | 07.09.2005 | ಬುಧವಾರ | ವರಸಿದ್ಧಿ ವಿನಾಯಕ ವ್ರತ |
| 11. | 03.10.2005 | ಸೋಮವಾರ | ಮಹಾಲಯ ಅಮಾವಾಸ್ಯೆ |
| 12. | 12.10.2005 | ಬುಧವಾರ | ಮಹಾನವಮಿ, ಆಯುಧಪೂಜೆ |
| 13. | 13.10.2005 | ಗುರುವಾರ | ವಿಜಯದಶಮಿ |
| 14. | 31.10.2005 | ಸೋಮವಾರ | ನರಕ ಚತುರ್ದಶಿ |
| 15. | 01.11.2005 | ಮಂಗಳವಾರ | ಕನ್ನಡ ರಾಜ್ಯೋತ್ಸವ |
| 16. | 02.11.2005 | ಬುಧವಾರ | ಬಲಿಪಾಡ್ಯಮಿ, ದೀಪಾವಳಿ |
| 17. | 04.11.2005 | ಶುಕ್ರವಾರ | ಖುತುಬ್-ಎ-ರಂಜಾನ್ |

**ಸೂಚನೆ:**

1) ಈ ಪಟ್ಟಿಯಲ್ಲಿ ಭಾನುವಾರಗಳಂದು ಬರುವ ಮೊಹರಂ ಕಡೇ ದಿನ (20.02.2005) ಕಾರ್ಮಿಕ ದಿನಾಚರಣೆ (01.05.2005) ಮಹಾತ್ಮಗಾಂಧಿ ಜಯಂತಿ (02.10.2005) ಕ್ರಿಸ್‌ಮಸ್ (25.12.2005) ಹಾಗೂ 2ನೇ ಶನಿವಾರದಂದು ಬರುವ ಚಾಂದ್ರಮಾನ ಯುಗಾದಿ (09.04.2005) ರಜಾ ದಿನಗಳನ್ನೊಳಗೊಂಡಿರುವುದಿಲ್ಲ.

2) ಸಾರ್ವಜನಿಕ ರಜಾ ದಿನಗಳಲ್ಲಿ ರಾಜ್ಯಾದ್ಯಂತ ಸರ್ಕಾರಿ ಕಛೇರಿಗಳು ಮುಚ್ಚಲ್ಪಡುತ್ತವೆ. ಕಛೇರಿಯ ಜರೂರು ಕೆಲಸವನ್ನು ವಿಲೇವಾರಿ ಮಾಡುವ ಬಗ್ಗೆ ಇಲಾಖಾ ಮುಖ್ಯಸ್ಥರುಗಳು ಸೂಕ್ತ ವ್ಯವಸ್ಥೆ ಮಾಡತಕ್ಕದ್ದು.

3) ಈ ಪಟ್ಟಿಯಲ್ಲಿ ಸೇರಿಸಲಾಗಿರುವ ಮುಸಲ್ಮಾನ ಹಬ್ಬಗಳು ನಿಗದಿತ ದಿನಾಂಕದಂದು ಬೀಳದಿದ್ದರೆ ಸರ್ಕಾರಿ ಸೇವೆಯಲ್ಲಿರುವ ಮುಸಲ್ಮಾನರಿಗೆ ನಿಗದಿತ ರಜೆಗೆ ಬದಲಾಗಿ ಹಬ್ಬದ ದಿವಸ ರಜಾ ಮಂಜೂರು ಮಾಡಬಹುದು.

4) ದಿನಾಂಕ: 17.10.2005 (ಸೋಮವಾರ) ದಂದು ತುಲಾ ಸಂಕ್ರಮಣ ಹಾಗೂ ದಿನಾಂಕ:18.11.2005 (ಶುಕ್ರವಾರ) ರಂದು ಹುತ್ತರಿ ಹಬ್ಬವನ್ನು ಆಚರಿಸಲು ಕೊಡಗು ಜಿಲ್ಲೆಗೆ ಮಾತ್ರ ಅನ್ವಯವಾಗುವಂತೆ ಸ್ಥಳೀಯ ಸಾರ್ವತ್ರಿಕ ರಜೆಯನ್ನು ಘೋಷಿಸಿದೆ.

5) ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ ಪ್ರತ್ಯೇಕ ರಜಾ ದಿನಗಳ ಪಟ್ಟಿಯನ್ನು ಬೆಂಗಳೂರಿನ ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರು ಪ್ರಕಟಿಸುವರು.

6) ಸಾರ್ವತ್ರಿಕ ರಜಾ ದಿನಗಳ ಜೊತೆಗೆ ರಾಜ್ಯ ಸರ್ಕಾರಿ ನೌಕರರು 2 ದಿವಸಗಳಿಗೆ ಮೀರದಂತೆ 2005ನೇ ವರ್ಷದಲ್ಲಿ ಅಧಿಸೂಚನೆಯ ಅನುಬಂಧದಲ್ಲಿ ತಿಳಿಸಿರುವ ಪರಿಮಿತ ರಜೆಯನ್ನು ಪೂರ್ವಾನುಮತಿ ಪಡೆದು ಉಪಯೋಗಿಸಿಕೊಳ್ಳಬಹುದು. ಸಾಂದರ್ಭಿಕ ರಜೆಯನ್ನು ಮಂಜೂರು ಮಾಡಲು ಅಧಿಕಾರವುಳ್ಳ ಅಧಿಕಾರಿಗಳು ಪ್ರಸ್ತುತ ಅನುಮತಿಗೆ ಮಂಜೂರಾತಿ ನೀಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ಜಿಯಾವುಲ್ಲಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ರಾಜ್ಯ ಶಿಷ್ಟಾಚಾರ).

**ಅಧಿಸೂಚನೆ-I ರ ಅನುಬಂಧ**

**ಸಂಖ್ಯೆ: ಸಿಆಸುಇ 15 ಹೆಚ್‌ಹೆಚ್‌ಎಲ್ 2004, ಬೆಂಗಳೂರು, ದಿನಾಂಕ: 1ನೇ ಡಿಸೆಂಬರ್, 2004**

**2005ನೇ ವರ್ಷಕ್ಕೆ ರಾಜ್ಯ ಸರ್ಕಾರಿ ನೌಕರರಿಗೆ ಇರುವ ಪರಿಮಿತ ರಜಾ ದಿನಗಳ ಪಟ್ಟಿ.**

| ಕ್ರಮ ಸಂಖ್ಯೆ | ದಿನಾಂಕ | ವಾರಗಳು | ಪರಿಮಿತ ರಜಾ ದಿನಗಳು |
|---|---|---|---|
| 1. | 01.01.2005 | ಶನಿವಾರ | ನೂತನ ವರ್ಷಾರಂಭ |
| 2. | 17.02.2005 | ಗುರುವಾರ | ಮಧ್ವ ನವಮಿ |
| 3. | 26.03.2005 | ಶನಿವಾರ | ಪವಿತ್ರ ಶನಿವಾರ |
| 4. | 18.04.2005 | ಸೋಮವಾರ | ರಾಮನವಮಿ |
| 5. | 12.05.2005 | ಗುರುವಾರ | ರಾಮಾನುಜಾಚಾರ್ಯ ಜಯಂತಿ |
| 6. | 13.05.2005 | ಶುಕ್ರವಾರ | ಶಂಕರಾಚಾರ್ಯ ಜಯಂತಿ |
| 7. | 23.05.2005 | ಸೋಮವಾರ | ಬುದ್ಧ ಪೂರ್ಣಿಮಾ |
| 8. | 19.08.2005 | ಶುಕ್ರವಾರ | ವರ ಮಹಾಲಕ್ಷ್ಮಿ ವ್ರತ, ಋಗ್ ಉಪಾಕರ್ಮ, ಯಜುರ್ ಉಪಾಕರ್ಮ |
| 9. | 26.08.2005 | ಶುಕ್ರವಾರ | ಕೃಷ್ಣ ಜನ್ಮಾಷ್ಟಮಿ |
| 10. | 06.09.2005 | ಮಂಗಳವಾರ | ಸ್ವರ್ಣಗೌರಿ ವ್ರತ |
| 11. | 15.09.2005 | ಗುರುವಾರ | ತಿರುಓಣಂ |
| 12. | 16.09.2005 | ಶುಕ್ರವಾರ | ಅನಂತ ಪದ್ಮನಾಭ ವ್ರತ |
| 13. | 19.09.2005 | ಸೋಮವಾರ | ಷಬ್-ಎ-ಬರಾತ್ |
| 14. | 17.10.2005 | ಸೋಮವಾರ | ತುಲಾ ಸಂಕ್ರಮಣ |
| 15. | 28.10.2005 | ಶುಕ್ರವಾರ | ಜಮತ್-ಉಲ್-ವಿದಾ |
| 16. | 15.11.2005 | ಮಂಗಳವಾರ | ಗುರುನಾನಕ್ ಜಯಂತಿ |
| 17. | 18.11.2005 | ಶುಕ್ರವಾರ | ಹುತ್ತರಿ ಹಬ್ಬ, ಭಕ್ತ ಕನಕದಾಸ ಜಯಂತಿ |
| 18. | 24.12.2005 | ಶನಿವಾರ | ಕ್ರಿಸ್‌ಮಸ್ ಈವ್ |

**ಸೂಚನೆ:**

ಈ ರಜಾ ಪಟ್ಟಿಯು ಸಾರ್ವತ್ರಿಕ ರಜಾ ದಿನಗಳಂದು ಬರುವ ಹೋಳಿ ಹಬ್ಬ (25.03.2005) ಸೌರಮಾನ ಯುಗಾದಿ (14.04.2005) ಹಾಗೂ ಷಬ್-ಎ-ಖದರ್ (31.10.2005) ಗಳನ್ನೊಳಗೊಂಡಿರುವುದಿಲ್ಲ.

**ಎಸ್. ಜಿಯಾವುಲ್ಲಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ರಾಜ್ಯ ಶಿಷ್ಟಾಚಾರ).

**ಅಧಿಸೂಚನೆ-II**

**ಸಂಖ್ಯೆ: ಸಿಆಸುಇ 15 ಹೆಚ್‌ಹೆಚ್‌ಎಲ್ 2004, ಬೆಂಗಳೂರು, ದಿನಾಂಕ: 1ನೇ ಡಿಸೆಂಬರ್, 2004**

ಭಾರತ ಸರ್ಕಾರದ ಒಳಾಡಳಿತ ವ್ಯವಹಾರಗಳ ಇಲಾಖೆಯ ಕ್ರಮಾಂಕ 20:25:26: ಪಿಯುಬಿ 1 ದಿನಾಂಕ: 15.06.1957ರ ಅಧಿಸೂಚನೆಯಲ್ಲಿ ಪ್ರಸ್ತಾಪಿಸಲಾಗಿರುವ ನೆಗೋಷಿಯಬಲ್ ಇನ್‌ಸ್ಟ್ರುಮೆಂಟ್ಸ್ ಆ್ಯಕ್ಟ್ 1881ರ (1881ರ ಅಧಿನಿಯಮ ಸಂಖ್ಯೆ 26) 25ನೇ ಸೆಕ್ಷನ್ ನಲ್ಲಿರುವ ವಿವರಣೆಯಂತೆ 2005ನೇ ವರ್ಷದಲ್ಲಿ ಈ ಕೆಳಗಿನ ದಿನಗಳನ್ನು ಕರ್ನಾಟಕ ರಾಜ್ಯಾದ್ಯಂತ ಸಾರ್ವಜನಿಕ ರಜೆಗಳೆಂದು ಘೋಷಿಸಲಾಗಿದೆ.

| ಕ್ರಮ ಸಂಖ್ಯೆ | ದಿನಾಂಕ | ವಾರಗಳು | ಸಾರ್ವತ್ರಿಕ ರಜಾ ದಿನಗಳು |
|---|---|---|---|
| 1. | 14.01.2005 | ಶುಕ್ರವಾರ | ಉತ್ತರಾಯಣ ಪುಣ್ಯಕಾಲ, ಸಂಕ್ರಾಂತಿ ಹಬ್ಬ |
| 2. | 21.01.2005 | ಶುಕ್ರವಾರ | ಬಕ್ರೀದ್ |
| 3. | 26.01.2005 | ಬುಧವಾರ | ಗಣ ರಾಜ್ಯೋತ್ಸವ |
| 4. | 08.03.2005 | ಮಂಗಳವಾರ | ಮಹಾ ಶಿವರಾತ್ರಿ |
| 5. | 25.03.2005 | ಶುಕ್ರವಾರ | ಗುಡ್‌ಫ್ರೈಡೇ |
| 6. | 01.04.2005 | ಶುಕ್ರವಾರ | ವಾರ್ಷಿಕ ಬ್ಯಾಂಕ್ ಲೆಕ್ಕಪತ್ರ ಮುಕ್ತಾಯ ದಿನ |
| 7. | 09.04.2005 | ಶನಿವಾರ | ಚಾಂದ್ರಮಾನ ಯುಗಾದಿ |
| 8. | 14.04.2005 | ಗುರುವಾರ | ಡಾ: ಅಂಬೇಡ್ಕರ್ ಜಯಂತಿ |
| 9. | 11.05.2005 | ಬುಧವಾರ | ಬಸವೇಶ್ವರ ಜಯಂತಿ |
| 10. | 15.08.2005 | ಸೋಮವಾರ | ಸ್ವಾತಂತ್ರ್ಯ ದಿನಾಚರಣೆ |
| 11. | 07.09.2005 | ಬುಧವಾರ | ವರಸಿದ್ದಿ ವಿನಾಯಕ ವ್ರತ |
| 12. | 30.09.2005 | ಶುಕ್ರವಾರ | ಅರ್ಧ ವಾರ್ಷಿಕ ಬ್ಯಾಂಕ್ ಲೆಕ್ಕಪತ್ರ ಮುಕ್ತಾಯ ದಿನ |
| 13. | 12.10.2005 | ಬುಧವಾರ | ಮಹಾನವಮಿ, ಆಯುಧಪೂಜೆ |
| 14. | 13.10.2005 | ಗುರುವಾರ | ವಿಜಯ ದಶಮಿ |
| 15. | 01.11.2005 | ಮಂಗಳವಾರ | ಕನ್ನಡ ರಾಜ್ಯೋತ್ಸವ |
| 16. | 02.11.2005 | ಬುಧವಾರ | ಬಲಿಪಾಡ್ಯಮಿ, ದೀಪಾವಳಿ |
| 17. | 04.11.2005 | ಶುಕ್ರವಾರ | ಖುತುಬ್-ಎ-ರಂಜಾನ್ |

**ಸೂಚನೆ:**

1) ಈ ರಜಾ ಪಟ್ಟಿಯು ಭಾನುವಾರದಂದು ಬರುವ ಮಹಾತ್ಮ ಗಾಂಧಿ ಜಯಂತಿ (02.10.2005) ರಜಾ ದಿನವನ್ನೊಳಗೊಂಡಿರುವುದಿಲ್ಲ.

2) ದಿನಾಂಕ: 17.10.2005 ಸೋಮವಾರ ದಂದು ತುಲಾ ಸಂಕ್ರಮಣ ಹಾಗೂ ದಿನಾಂಕ: 18.11.2005 ಶುಕ್ರವಾರ ದಂದು ಹುತ್ತರಿ ಹಬ್ಬವನ್ನು ಆಚರಿಸಲು ಕೊಡಗು ಜಿಲ್ಲೆಗೆ ಮಾತ್ರ ಅನ್ವಯವಾಗುವಂತೆ ಸ್ಥಳೀಯ ಸಾರ್ವತ್ರಿಕ ರಜೆಯನ್ನು ಘೋಷಿಸಿದೆ.

3) ಈ ರಜಾ ದಿನಗಳು ವಾಣಿಜ್ಯ ಬ್ಯಾಂಕ್ ಹಾಗೂ ಸಹಕಾರಿ ಬ್ಯಾಂಕ್‌ಗಳ ವಾರ್ಷಿಕ: ಅರ್ಧವಾರ್ಷಿಕ, ಲೆಕ್ಕಪತ್ರ ಮುಕ್ತಾಯಕ್ಕೆ ಮಾತ್ರ ಅನ್ವಯವಾಗುತ್ತದೆ. ಈ ದಿವಸಗಳಲ್ಲಿ ರಿಜರ್ವ್ ಬ್ಯಾಂಕ್ ಆಫ್ ಇಂಡಿಯಾ ಕಛೇರಿಯು ಕಾರ್ಯ ನಿರ್ವಹಿಸುತ್ತದೆ. ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾಗೆ ಈ ಹಿಂದಿನ ವರ್ಷಗಳಲ್ಲಿದ್ದಂತೆ ಜೂನ್ 30 ಮತ್ತು ಡಿಸೆಂಬರ್ 31 ವಾರ್ಷಿಕ ಹಾಗೂ ಅರ್ಧ ವಾರ್ಷಿಕ ಲೆಕ್ಕಪತ್ರ ಮುಕ್ತಾಯದ ದಿನಗಳಾಗಿರುತ್ತವೆ. (ಈ ದಿನಗಳು ಭಾನುವಾರ ಅಥವಾ ಸಾರ್ವಜನಿಕ ರಜೆ ಎಂದು ಬಂದಲ್ಲಿ ಆ ತಿಂಗಳ ಕೊನೆಯ ಕೆಲಸದ ದಿನವು ಲೆಕ್ಕಪತ್ರ ಮುಕ್ತಾಯ ದಿನವಾಗಿರುತ್ತದೆ.

**ಎಸ್. ಜಿಯಾವುಲ್ಲಾ**

ಪಿ.ಆರ್. 1671

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ರಾಜ್ಯ ಶಿಷ್ಟಾಚಾರ).

**ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಪ್ರಥಮ ದರ್ಜೆ ನ್ಯಾಯಿಕ ದಂಡಾಧಿಕಾರಿಗಳ ನ್ಯಾಯಾಲಯ, ಕೂಡ್ಲಿಗಿ**

**ಸಿ.ಸಿ. ನಂ.312/04**

ಆರಕ್ಷಕ ಉಪ ನಿರೀಕ್ಷಕರು, ಕೊಟ್ಟೂರು ಪೊಲೀಸು ಠಾಣೆ **ವಿರುದ್ಧ** ಫಿರ್ಯಾದುದಾರರು

ಕೊಲಿಮಿ ಷೇಕ್ಷಾವಲಿ ತಂದೆ ಹಯಾತ್‌ಸಾಬ್, ಅಪರಾಧಿ.

ಬಳ್ಳಾರಿ ಕ್ಯಾಂಪ್, ಕೊಟ್ಟೂರು.

**ಅಧಿಸೂಚನೆ**

ಮೇಲಿನ ಕೇಸಿನಲ್ಲಿ ಫಿರ್ಯಾದುದಾರರಾದ ಆರಕ್ಷಕ ಉಪ ನಿರೀಕ್ಷಕರು, ಕೊಟ್ಟೂರು ಪೊಲೀಸು ಠಾಣೆ ಇವರು ಅಪರಾಧಿ ವಿರುದ್ಧ ಸೆಕ್ಷನ್ 41(ಪಿ) 102 ಸಿ.ಆರ್.ಪಿ.ಸಿ. ರೆಡ್‌ವಿತ್ 379 ಐ.ಪಿ.ಸಿ. ಅಡಿಯಲ್ಲಿ ಮೊಕದ್ದಮೆ ದಾಖಲು ಮಾಡಿರುತ್ತಾರೆ. ಈ ಕೇಸಿನಲ್ಲಿ ಫಿರ್ಯಾದುದಾರರು ಒಂದು ಕೆಂಪು ಬಣ್ಣದ ಬಜಾಜ್ ಎಂ-80 ಮೋಟಾರು ಸೈಕಲ್ ನಂ. ಕೆಎ-04/ಇ-4312 ಮತ್ತು ಅಲ್ಯುಮೀನಿಯಂ ವೈಯರನ್ನು ಅಪರಾಧಿ ಕಡೆಯಿಂದ ಕ್ರೈಂ ನಂ.3/2004 ಪಿಎಫ್ ನಂಬರ್ 2/2004 ರಲ್ಲಿ ಜಪ್ತು ಮಾಡಿ ಕೋರ್ಟಿಗೆ ಹಾಜರು ಪಡಿಸಿರುತ್ತಾರೆ ಮತ್ತು ಈ ಕೇಸು ವಿಚಾರಣೆಯ ನಂತರ ಮುಕ್ತಾಯಗೊಂಡಿರುತ್ತದೆ. ದಿನಾಂಕ: 22.07.2004ರಂದು ತೀರ್ಪು ಆಗಿರುತ್ತದೆ. ತೀರ್ಪಿನಲ್ಲಿ ಅಪರಾಧಿಯು ಬಿಡುಗಡೆಯಾಗಿರುತ್ತಾನೆ ಮತ್ತು ಕೆಂಪು ಬಣ್ಣದ ಬಜಾಜ್ ಎಂ.80 ಮೋಟಾರು ಸೈಕಲ್ ನಂ.ಕೆಎ-04/ಇ-4312ನ್ನು ಅಪರಾಧಿಯು ತನ್ನದೆಂದು ಕ್ಲೇಮು ಮಾಡಿಲ್ಲವಾದ ಕಾರಣ ಸೆಕ್ಷನ್ 457(2)ರ ಅಡಿಯಲ್ಲಿ ಅಧಿಸೂಚನೆ ಹೊರಡಿಸಲು ಆಜ್ಞೆಯಾಗಿರುತ್ತದೆ.

ಆದ್ದರಿಂದ ಮೇಲ್ಕಂಡ ವಾಹನದ ಬಗ್ಗೆ ಯಾರೂ ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನದ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳನ್ನು ಈ ಕೆಳಗೆ ಸಹಿ ಮಾಡುವವರ ಸಮ್ಮುಖದಲ್ಲಿ ಈ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಆರು (6) ತಿಂಗಳ ಒಳಗೆ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಮೇಲ್ಕಂಡ ವಾಹನದ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ದಿನಾಂಕ 20 ಮಾಹೆ ನವೆಂಬರ್ 2004ರಂದು ಕೋರ್ಟಿನ ಮೊಹರ್‌ನಿಶಿಯೊಂದಿಗೆ ಕೊಡೋಣಾಯಿತು.

**ಜೆ.ಆರ್. ಮೆಂಡೋನ್ಸಾ**

ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಪ್ರಥಮ ದರ್ಜೆ ನ್ಯಾಯಿಕ ದಂಡಾಧಿಕಾರಿಗಳು, ಕೂಡ್ಲಿಗಿ.

ಪಿ.ಆರ್. 1657

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯ ಸಾಗರ**

**ಅಧಿಸೂಚನೆ ಸಂಖ್ಯೆ: ಬಿ3. ಅಮೊ.ವಾಹನ.15/04-05, ದಿನಾಂಕ: 16ನೇ ನವೆಂಬರ್, 2004**

ಸಾಗರ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸಾಗರ ವಿಭಾಗದ ಇಲಾಖಾ ಸಿಬ್ಬಂದಿ ವರ್ಗದವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಸದರಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ತಪಶೀಲು ಕೆಳಕಂಡಂತಿರುತ್ತದೆ.

| ಕ್ರಮ ಸಂಖ್ಯೆ | ವಾಹನಗಳ ವಿವರ | ಅರಣ್ಯ ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1. | Jeep. KA-03-M-5814 | ವ.ಅ.ಅ. ಚೋರಡಿ ಅ.ಮೊ.ನಂ. 58/2004-05 | DR-16305 | DR-16305 |
| 2. | 407-Mini Lorry, KA-12-2147 | ವ.ಅ.ಅ. ಸಾಗರ ಅ.ಮೊ. ನಂ.69/2004-05 | 709644 | 357011-BUQ-803520 |
| 3. | Caliber Byke. KA-15-J-1309 | ವ.ಅ.ಅ. ಸಾಗರ ಅ.ಮೊ. ನಂ.69/2004-05 | DDM-BKR-21596 | |
| 4. | Bajaj M-80, KA-14-J-4931 | ವ.ಅ.ಅ. ನಗರ ಅ.ಮೊ. ನಂ. 23/2004-05 | | |
| 5. | Scooter, KA-20-H-7546 | ವ.ಅ.ಅ. ಶಿಕಾರಿಪುರ ಅ.ಮೊ. ನಂ. 58/2004-05 | | |
| 6. | Yamaha Byke, KA-15-J-1121 | ವ.ಅ.ಅ. ಸೊರಬ ಅ.ಮೊ. ನಂ.49/2004-05 | 5KA109043 | 0205KA 109043 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರು ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನಗಳ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳನ್ನು ಕೆಳ ಸಹಿ ಮಾಡಿರುವವರ ಸಮ್ಮುಖದಲ್ಲಿ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನಗಳನ್ನು ಶ್ರೀಗಂಧ ಮತ್ತು ಇತರೇ ಅರಣ್ಯ ಉತ್ಪನ್ನವನ್ನು ಕಳ್ಳಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ ವಾಹನಗಳನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳ ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿ ಮಾಡಿದವರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲ್ಕಂಡ ವಾಹನಗಳ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್. 1660

**IN THE COURT OF COMMISSIONER FOR WORKMEN'S COMPENSATION, BIDAR**

**PROCLAMATION**

**No.LOB/WCA/Cr-56/2004**

| **Applicants:** | **V/s** | **Respondents:** |
|---|---|---|
| Manik Rao. S/o Bhagvanth Rao Patil | 1. | J. Srinivas Ralt |
| Age:50Yrs. Occ.Agri. R/o Village Mannalli | | Shita Drugs Pvt.Ltd., Erragadda, Hyderabad. |
| Tq: &Dist. Bidar & Others. | 2. | Oriental Insurance Co. Ltd., Hyderabad. |

Sri Manik Rao, F/o Ramesh R/o Village Mannalli Tq:& Dist. Bidar have/has filed application in this court claiming compensation stating that Late: Ramesh was working as Driver Under the Respondent No.I he met with an accident arising out of and during the course of employment as a result he died on 21-07-2004

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclamation, if no applications or objections are received within the specified date the court will proceeded further in the matter.

COMMISSIONER FOR WORKMEN'S
COMPENSATION, BIDAR.

PR-1666

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ, ಭದ್ರಾವತಿ**

**ಸಂಖ್ಯೆ: ಎಫ್‌ಓಸಿ/ ಸಿಓಎನ್/ ಸಿಆರ್ 16/01-02, ದಿನಾಂಕ: 29ನೇ ಅಕ್ಟೋಬರ್, 2004**

**ಉಪಸ್ಥಿತರು:** ಶ್ರೀಮತಿ ಸೀಮಾಗರ್ಗ್ ಭಾಅಸೇ
ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಭದ್ರಾವತಿ ವಿಭಾಗ, ಭದ್ರಾವತಿ.

**ಫಿರ್ಯಾದುದಾರರು:**
ಪೊಲೀಸ್ ಸಬ್‌ಇನ್ಸ್‌ಪೆಕ್ಟರ್
ಅಪರಾಧ ವಿಭಾಗ, ತರೀಕೆರೆ.

**ವಿರುದ್ಧ**

**ಅರ್ಜಿದಾರರು**
ಶ್ರೀ ಎಸ್.ಬಿ. ಪ್ರಸನ್ನಕುಮಾರ್ ಬಿನ್
ಜಿ.ಪಿ.ಎ. ಹೋಲ್ಡರ್ ಆಫ್ ಎಂ. ಮಂಜುನಾಥ್
ಬಿನ್ ಮಲ್ಲಪ್ಪ, ವ್ಯವಸಾಯಗಾರರು, ಕಾಮನಕಟ್ಟೆ ರಾಮದೇವ್ರ
ಸ್ಟ್ರೀಟ್, ತರೀಕೆರೆ ನಗರ, ತರೀಕೆರೆ.

**ಪ್ರಕರಣದ ಹಿನ್ನೆಲೆ:**

ದಿನಾಂಕ: 02.09.2001ರಂದು ಪೊಲೀಸ್ ನಿರೀಕ್ಷಕರು, ತರೀಕೆರೆ ಇವರಿಗೆ ಖಚಿತ ವರ್ತಮಾನದ ಮೇರೆಗೆ ರಾತ್ರಿ 8-00 ಗಂಟೆ ಸಮಯದಲ್ಲಿ ತರೀಕೆರೆ ಇಟ್ಟಿಗೆ ಗ್ರಾಮದ ರಸ್ತೆಯಲ್ಲಿ ಇಂಜಿನೀಯರ್ ಬಸವರಾಜಪ್ಪರವರ ಅಡಿಕೆ ತೋಟದ ಹತ್ತಿರ ಮರೆಯಾಗಿನಿಂತು ಪೊಲೀಸ್ ಸಬ್‌ಇನ್ಸ್‌ಪೆಕ್ಟರ್ ಅಪರಾದ ವಿಭಾಗ ತರೀಕೆರೆ, ಹೆಚ್.ಸಿ. 22, ಪಿಸಿ 363 ರವರು ಕಾಯುತ್ತಿರುವಾಗ ತರೀಕೆರೆ ಕಡೆಯಿಂದ ಒಂದು ಮೋಟಾರ್ ಸೈಕಲ್‌ನಲ್ಲಿ ಇಬ್ಬರು ಒಂದು ಗೋಣಿಚೀಲದಲ್ಲಿ ಮೂಟೆ ಕಟ್ಟಿ ಇಟ್ಟುಕೊಂಡು ಇಟ್ಟಿಗೆ ಗ್ರಾಮದ ಕಡೆ ಪ್ರಯಾಣ ಮಾಡುತ್ತಿದ್ದವರನ್ನು ಬ್ಯಾಟರಿ ಬೆಳಕಿನಿಂದ ತಡೆದು ನಿಲ್ಲಿಸಿ ಕೈ ಮಾಡಿದಾಗ ರಸ್ತೆಯಲ್ಲಿ ಸಮವಸ್ತ್ರದಲ್ಲಿದ್ದ ಇಲಾಖೆಯವರನ್ನು ಕಂಡು ರಸ್ತೆ ಪಕ್ಕದಲ್ಲಿ ಹೋಗಲು ಪ್ರಯತ್ನಿಸಿದಾಗ ಸಂಶಯ ಬಂದು ಹಿಡಿದು ನಿಲ್ಲಿಸಿ ಮೋಟಾರ್ ಸೈಕಲ್ ಮೇಲೆ ಇಬ್ಬರ ಮಧ್ಯೆ ಒಂದು ಗೋಣಿಚೀಲದ ಮೂಟೆ ಇದ್ದು ಬಿಚ್ಚಿಸಿ ನೋಡಲಾಗಿ ಅದರ ಒಳಗಡೆ ಒಂದು ಹಳದಿ ಬಣ್ಣದ ಕಿಟ್ ಬ್ಯಾಗ್ ಇದ್ದು ಅದರಲ್ಲಿ ಶ್ರೀಗಂಧದ ಚೂರುಗಳಿದ್ದು ಸದರಿ ಕಿಟ್ ಬ್ಯಾಗಿನ ಒಳಗಡೆ ಇನ್ನೊಂದು ಪ್ಲಾಸ್ಟಿಕ್ ದೊಡ್ಡ ಕವರ್ ಇದ್ದು ಅದರಲ್ಲಿಯೂ ಸಹ ಶ್ರೀಗಂಧದ ಚೆಕ್ಕೆಗಳು ಇರುವುದು ಕಂಡು ಬಂತು. ಶ್ರೀಗಂಧದ ಸಾಗಾಟದ ಬಗ್ಗೆ ಪರವಾನಿಗೆ ಇದೆಯೇ ಎಂದು ಪ್ರಶ್ನಿಸಿದಾಗ ಇಲ್ಲವೆಂದು ನುಡಿದರು. ಈ ಶ್ರೀಗಂಧವನ್ನು ಎಲ್ಲಿಂದ ತಂದಿರಿ ಎಂದು ಪ್ರಶ್ನಿಸಿದಾಗ ಸಮರ್ಪಕ ಉತ್ತರ ನೀಡಲಿಲ್ಲ ಆಗ ಪಂಚರನ್ನು ಬರಮಾಡಿಕೊಂಡು ಪಂಚರ ಸಮಕ್ಷಮ ಗೋಣಿಚೀಲದಲ್ಲಿದ್ದ ಒಳಗೆ ಹಳದಿ ಕಿಟ್ ಬ್ಯಾಗಿನಲ್ಲಿದ್ದ ಶ್ರೀಗಂಧದ ಚೂರನ್ನು ಬ್ಯಾಗ್ ಸಮೇತ ತೂಕ ಮಾಡಲಾಗಿ 15 ಕೆ.ಜಿ. ತೂಕವಿತ್ತು. ಪ್ಲಾಸ್ಟಿಕ್ ಬ್ಯಾಗಿನಲ್ಲಿದ್ದ ಶ್ರೀಗಂಧದ ಚೂರುಗಳನ್ನು ತೂಕ ಮಾಡಿ ನೋಡಲಾಗಿ 7 ಕೆಜಿ ತೂಕವಿತ್ತು. ಆರೋಪಿತರ ಹೆಸರು, ವಿಳಾಸ ತಿಳಿಯಲಾಗಿ ಮೋಟಾರು ಸೈಕಲ್ ಓಡಿಸುತ್ತಿದ್ದವನ ಹೆಸರು ತ್ಯಾಗರಾಜು ಬಿನ್ ರಾಜಣ್ಣ, ಸರಾಯಿ ವ್ಯಾಪಾರ ಹೆಚ್. ರಂಗಾಪುರ ವಾಸಿ, ಶ್ರೀಗಂಧದ ಚೀಲ ಹಿಡಿದುಕೊಂಡು ಮೋಟಾರ್ ಸೈಕಲ್ ಹಿಂಭಾಗ ಕುಳಿತಿದ್ದವನ ಹೆಸರು ಟಿ.ಹೆಚ್. ವೆಂಕಟೇಶ ಬಿನ್ ಹನುಮಂತಪ್ಪ, ಹೆಚ್. ರಂಗಾಪುರ, ಸದರಿ ಮೋಟಾರು ಸೈಕಲ್ ಸುಜುಕಿ ಸಮುರಾಯ್ ನಂ. ಕೆಎ-18 ಇ-6671 ಸುಮಾರು 6,500-00 ರೂ.ಬೆಲೆಯ ಶ್ರೀಗಂಧದ ಬೇರು ಚಿಕ್ಕೆಗಳನ್ನು ರಹದಾರಿ ಇಲ್ಲದೆ ಸಾಗಿಸುತ್ತಿದ್ದರಿಂದ ಸದರಿ ಶ್ರೀಗಂಧವನ್ನು ಪಂಚನಾಮೆ ಮುಖಾಂತರ ಅಮಾನತ್ತುಪಡಿಸಿ ಆರೋಪಿತರನ್ನು ದಸ್ತಗಿರಿ ಮಾಡಿಕೊಂಡು ಠಾಣೆಗೆ ಬಂದು ಠಾಣೆ ಮೊ.ನಂ.195/2001 ಕಲಂ 86, 87 ಕೆಎಫ್ ಆಕ್ಟ್ ಆರ್/ ಡಬ್ಲ್ಯೂ 379 ಐಪಿಸಿ ರೀತ್ಯಾ ಸರ್ಕಾರದ ಪರವಾಗಿ ಕೇಸು ದಾಖಲು ಮಾಡಿರುತ್ತಾರೆ ಹಾಗೂ ದಿನಾಂಕ: 05.09.2001ರಂದು ಈ ನ್ಯಾಯಾಲಯಕ್ಕೆ ಪ್ರಕರಣದ ದಾಖಲಾತಿಗಳನ್ನು ಒಪ್ಪಿಸಿ ಅರಣ್ಯ ಕಾಯಿದೆ 71(ಎ) ಪ್ರಕಾರ ಕ್ರಮ ಜರುಗಿಸಲು ಹಾಗೂ ವಾಹನವನ್ನು ಶ್ರೀಗಂಧವನ್ನು ವಶಕ್ಕೆ ಪಡೆಯಲು ಕೋರಿರುತ್ತಾರೆ.

ಸದರಿ ಪೊಲೀಸ್ ಸಬ್‌ಇನ್ಸ್‌ಪೆಕ್ಟರ್ ಅಪರಾಧ ವಿಭಾಗ ತರೀಕೆರೆ ಇವರ ಕೋರಿಕೆಯಂತೆ ಮೇಲ್ಕಂಡ ಪ್ರಕರಣವನ್ನು ಅರಣ್ಯ ಕಾಯಿದೆ 71(ಎ) ಪ್ರಕಾರ ಕ್ರಮ ಜರುಗಿಸಿ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಹಾಗೂ ಶ್ರೀಗಂಧವನ್ನು ಈ ನ್ಯಾಯಾಲಯದಿಂದ ಮುಂದಿನ ಆದೇಶ ನೀಡುವವರೆಗೂ ವಲಯ ಅರಣ್ಯಾಧಿಕಾರಿ ತರೀಕೆರೆ ವಲಯ ಇವರ ವಶಕ್ಕೆ ಸುರಕ್ಷತೆಗೆ ನೀಡಿರುತ್ತದೆ.

ದಿನಾಂಕ:19.03.2002ರಂದು ಶ್ರೀ ಎಸ್.ಬಿ. ಪ್ರಸನ್ನಕುಮಾರ್ ಇವರ ಜೆಪಿಎ ಮಂಜುನಾಥ ಬಿನ್ ಮಲ್ಲಪ್ಪ ತರೀಕೆರೆ ಇವರು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ ತರೀಕೆರೆ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಹಾಗೂ ಸಿಬ್ಬಂದಿಯವರು ಅಮಾನತ್ತುಪಡಿಸಿದ ವಾಹನ ಸುಜುಕಿ ಸಮುರಾಯ್ ಮೋಟಾರ್ ಸೈಕಲ್ ಕೆಎ-18 ಇ-6671ರ ಮಾಲೀಕರಾಗಿರುತ್ತೇನೆ. ಸದರಿ ವಾಹನದಲ್ಲಿ ಯಾವುದೇ ಅರಣ್ಯ ಉತ್ಪನ್ನ ಸಾಗಾಣಿಕೆ ಆಗಿರುವುದಿಲ್ಲ ಪೊಲೀಸ್ ಸಿಬ್ಬಂದಿ ವರ್ಗದವರು ಸುಳ್ಳು ಪ್ರಕರಣ ದಾಖಲು ಮಾಡಿರುತ್ತಾರೆ, ಈ ವಾಹನವನ್ನು ಬಿಡುಗಡೆ ಮಾಡಬೇಕೆಂದು ಕೋರಿರುತ್ತಾರೆ. ಅಲ್ಲದೆ ನ್ಯಾಯಾಲಯವು ವಿಧಿಸುವ ಷರತ್ತಿಗೆ ಬದ್ಧನಾಗಿರುವುದಾಗಿ ತಿಳಿಸಿರುತ್ತಾರೆ. ವಾಹನವು ತರೀಕೆರೆ ವಲಯ ಅರಣ್ಯಾಧಿಕಾರಿ ಕಛೇರಿ ಬಯಲಿನಲ್ಲಿರುವುದರಿಂದ ಬಿಸಿಲು ಮಳೆಗೆ ಸಿಕ್ಕಿ ಉಪಯೋಗಕ್ಕೆ ಬಾರದಂತೆ ಆಗುತ್ತದೆ. ಆದ್ದರಿಂದ ದಯಮಾಡಿ ವಾಹನ ಬಿಡುಗಡೆ ಮಾಡಬೇಕಾಗಿ ಕೋರಿರುತ್ತಾರೆ.

ದಿನಾಂಕ: 02.04.2002ರಂದು ವಾಹನದ ಮಾಲೀಕರಿಗೆ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ) ಪ್ರಕಾರ ಕಾರಣ ಕೇಳಿ ತಿಳುವಳಿಕೆ ಪತ್ರ ನೀಡಿರುತ್ತದೆ ವಾಹನದ ಮಾಲೀಕರು ದಿನಾಂಕ:29.08.2002ರಂದು ಈ ನ್ಯಾಯಾಲಯದ ನೋಟೀಸ್‌ಗೆ ಸಮಜಾಯಿಸಿ ನೀಡಿ, ಈ ಪ್ರಕರಣದಲ್ಲಿ ತ್ಯಾಗರಾಜ್ ಹಾಗೂ ಇತರರ ಬಗ್ಗೆ ಸಿಸಿ ನಂ. 780/2001 ತರೀಕೆರೆ ಪೊಲೀಸ್ ಠಾಣೆಯಲ್ಲಿ ದಾಖಲಾಗಿರುತ್ತದೆ. ಆದ್ದರಿಂದ ವಾಹನದಲ್ಲಿ ನಡೆದ ಅರಣ್ಯ ಪ್ರಕರಣಕ್ಕೂ ನನಗೂ ಸಂಬಂಧ ಇಲ್ಲ ಎಂದು ಮಾಲೀಕರು ತಿಳಿಸಿರುತ್ತಾರೆ. ವಾಹನದ ಉಪಯೋಗವು ಹೆಚ್ಚು ಅವಶ್ಯಕವಾಗಿದ್ದು ವಾಹನವನ್ನು ಬಿಡುಗಡೆ ಮಾಡಲು ವಿನಂತಿಸಿರುತ್ತಾರೆ.

ದಿನಾಂಕ:15.10.2003ರಂದು ಸಹಾಯಕ ಸರ್ಕಾರಿ ಅಭಿಯೋಜಕರು, ಜೆ.ಎಂ.ಎಫ್.ಸಿ ನ್ಯಾಯಾಲಯ ಭದ್ರಾವತಿ ಇವರು ಈ ಪ್ರಕರಣದ ಬಗ್ಗೆ ಆಕ್ಷೇಪಣಾ ವರದಿ ಒಪ್ಪಿಸಿ ದಿನಾಂಕ: 02.09.2001ರಂದು ಪೊಲೀಸ್ ಸಿಬ್ಬಂದಿ ವರ್ಗದವರು ಸುಜುಕಿ ಮೋಟಾರ್ ಬೈಕ್ ನಂ. ಕೆಎ-18-ಇ-6671 ರಲ್ಲಿ ಶ್ರೀಗಂಧವನ್ನು ಸಾಗಾಣಿಕೆ ಮಾಡುತ್ತಿರುವುದನ್ನು ಪತ್ತೆ ಹಚ್ಚಿ ವಶಪಡಿಸಿಕೊಂಡಿರುವುದು ಅವರು ನ್ಯಾಯಾಲಯಕ್ಕೆ ಸಲ್ಲಿಸದ ದಾಖಲಾತಿಗಳಿಂದ ತಿಳಿದು ಬಂದಿರುತ್ತದೆ. ವಾಹನದ ಮಾಲೀಕರು ಸ್ವತಃ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸದೆ ವಾಹನವನ್ನು ಬಿಡುಗಡೆ ಮಾಡುವಂತೆ ಕೋರಿ ಎಂ. ಮಂಜುನಾಥ ಎಂಬುವರಿಗೆ ಅಧಿಕಾರ ಪತ್ರವನ್ನು ನೀಡಿ ಅರ್ಜಿಯನ್ನು ಸಲ್ಲಿಸಲಾಗಿದ್ದು ಅದನ್ನು ಈ ಪ್ರಕರಣದಲ್ಲಿ ಪರಿಗಣಿಸಲು ಬರುವುದಿಲ್ಲ ಏಕೆಂದರೆ ಸ್ವತಃ ವಾಹನದ ಮಾಲೀಕರೇ ಖುದ್ದಾಗಿ ತಾವು ಇಲ್ಲವೇ ನೇಮಿಸಿದಂತಹ ವ್ಯಕ್ತಿಗಳು ತಮ್ಮ ವಾಹನ ಪ್ರಕರಣದಲ್ಲಿ ಯಾವ ರೀತಿಯಲ್ಲಿ ಭಾಗಿಯಾಗಿತ್ತು ಇಲ್ಲವೇ ವಾಹನ ನನ್ನ ಅನುಮತಿ ಇಲ್ಲದೇ ಬಾಗಿಯಾಗಿತ್ತೇ ಎಂಬುದರ ಬಗ್ಗೆ ಸಮಜಾಯಿಸಿ ನೀಡಬೇಕಾಗಿರುತ್ತದೆ. ತಮ್ಮ ಹೊಣೆಗಾರಿಕೆಯನ್ನು ಅಧಿಕಾರ ಪತ್ರ ನೀಡುವ ಮುಖಾಂತರ ಯಾವುದೇ ಇತರೇ ವ್ಯಕ್ತಿಗೆ ನೀಡಿ ವಾಹನ ಬಿಡುಗಡೆ ಅರ್ಜಿಯನ್ನು ಸಲ್ಲಿಸಲು ಬರುವುದಿಲ್ಲ ಈ ಸಂಬಂಧಿಸಿದ ಕ್ರೈಮ್ಸ್ 2000(3) ಪುಟ 563 ಕೇರಳ ಹೈಕೋರ್ಟ್ ಈ ಪ್ರಕರಣವನ್ನು ಉದಾಹರಿಸದ್ದು, ಈ ತೀರ್ಮಾನದಲ್ಲಿ ಯಾವುದೇ ವಾಹನ ಅನಧಿಕೃತವಾಗಿ ಅರಣ್ಯ ಉತ್ಪನ್ನಗಳನ್ನು ಸಾಗಿಸುತ್ತಿದ್ದು ಕಂಡುಬಂದಲ್ಲಿ ಅಂತಹ ವಾಹನವನ್ನು ಬಿಡುಗಡೆ ಕೋರಿ ಅರ್ಜಿಯನ್ನು ಸಲ್ಲಿಸುವ ವಾಹನ

ಮಾಲೀಕರು ತಾನು ಸಹ ಅನಧಿಕೃತ ಕಳ್ಳಸಾಗಾಣಿಕೆಯಲ್ಲಿ ಭಾಗಿಯಾಗಿಲ್ಲವೆಂದು ಪುರಾವೆ ಮಾಡುವುದು ಸಾಲದಾಗಿದ್ದು, ಸದರಿ ವಾಹನವನ್ನು ಯಾರ ಉಸ್ತುವಾರಿಗೆ ಚಲಾಯಿಸಲು ನೀಡಲಾಗಿತ್ತೊ ಅಂತಹ ವ್ಯಕ್ತಿಯೂ ಸಹ ಎಲ್ಲಾ ಮುಂಜಾಗರೂಕತೆಯನ್ನು ತೆಗೆದುಕೊಂಡರೂ ಸಹ ಕಳ್ಳ ಸಾಗಾಣಿಕೆ ಆಗಿದೆಯೆಂದು ಪುರಾವೆ ಮಾಡಬೇಕಾಗಿದೆ.

ಮಧ್ಯಂತರ ಅರ್ಜಿಯಲ್ಲಿ ಎಲ್ಲಾ ವಿಷಯಗಳನ್ನು ಪರಿಶೀಲಿಸಲು ಬರುವುದಿಲ್ಲ ವಿಚಾರಣ ಹಂತದಲ್ಲಿ ಮಾತ್ರ ಸದರಿ ವಿಷಯಗಳನ್ನು ಪರಿಗಣಿಸಲು ಬರುತ್ತದೆ. ಆದ್ದರಿಂದ ಈ ಹಂತದಲ್ಲಿ ಅರ್ಜಿದಾರರಿಗೆ ವಾಹನವನ್ನು ಬಿಟ್ಟುಕೊಡಲು ಬರುವುದಿಲ್ಲ ಮತ್ತು ಅವರ ಅರ್ಜಿ ಊರ್ಜಿತವಾದುದಲ್ಲ ಈ ಎಲ್ಲಾ ಕಾರಣಗಳಿಂದ ಅರ್ಜಿದಾರರು ಸಲ್ಲಿಸಿರುವ ವಾಹನದ ಬಿಡುಗಡೆ ಕೋರಿ ಅರ್ಜಿಯನ್ನು ತಿರಸ್ಕರಿಸಬೇಕಾಗಿ ಸರ್ಕಾರ ಅಭಿಯೋಜನೆಯ ವತಿಯಿಂದ ವಿನಂತಿಸಿಕೊಂಡಿರುತ್ತಾರೆ.

ಮೇಲ್ಕಂಡ ಪ್ರಕರಣದ ಬಗ್ಗೆ ಅರ್ಜಿದಾರರ ಮಧ್ಯಂತರ ಅರ್ಜಿಯ ಬಗ್ಗೆ ಈ ನ್ಯಾಯಾಲಯದಲ್ಲಿ 21.01.04ರಂದು ವಿಚಾರಣೆ ನಡೆಸಿರುತ್ತದೆ ಆ ದಿನ ಅರ್ಜಿದಾರರ ಅರ್ಜಿ ಸಹಾಯಕ ಸರ್ಕಾರಿ ಅಭಿಯೋಜಕರ ತಕರಾರು ಅರ್ಜಿ ಹಾಗೂ ಪ್ರಕರಣಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಪರಿಶೀಲಿಸಿ ಅಕ್ರಮ ಶ್ರೀಗಂಧದ ಸಾಗಾಣಿಕೆ ಸಂಬಂಧ ಸುಜುಕಿ ಮೋಟರ್ ಸೈಕಲ್ ಕೆಎ-18 ಇ-6671 ವಾಹನದ ಬಿಡುಗಡೆ ಬಗ್ಗೆ ಸಂಪೂರ್ಣ ವಿಚಾರಣೆ ಅಗತ್ಯವಿದೆ ಎಂದು ಪರಿಶೀಲಿಸಿ ಈ ಹಂತದಲ್ಲಿ ವಾಹನ ಬಿಡುಗಡೆ ಅಸಾಧ್ಯವೆಂದು ಪರಿಗಣಿಸಿ ವಾಹನ ಮಾಲೀಕರ ಅರ್ಜಿಯನ್ನು ದಿನಾಂಕ: 21.01.2004ರಂದು ತಿರಸ್ಕರಿಸಲಾಗಿದೆ. ವಾಹನದ ಮಾಲೀಕರು ಈ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಿರುವುದಿಲ್ಲ.

ಈ ಪ್ರಕರಣದ ಬಗ್ಗೆ ಅಂತಿಮ ಆದೇಶ ಹೊರಡಿಸಲು ದಿನಾಂಕ: 02.06.2004 ರಿಂದ 06.10.2004ರ ವರೆಗೆ ವಿವಿಧ ದಿನಾಂಕಗಳಂದು ಈ ನ್ಯಾಯಾಲಯದಲ್ಲಿ ವಿಚಾರಣೆ ನಡೆಸಿರುತ್ತದೆ ಅಭಿಯೋಜನಾ ವತಿಯಿಂದ ಖಾಸೀಂ ಬಿನ್ ಲೇಟ್ ಮಹಮದ್ ಮೋಹಿದ್ದೀನ್ ಪಿಎಸ್ಐ ಲಿಂಗದಹಳ್ಳಿ ಪೊಲೀಸ್ ಸ್ಟೇಷನ್ ಇವರು ಪಿಡಬ್ಲ್ಯೂ 1 ಸಾಕ್ಷಿದಾರರಾಗಿ ಹೇಳಿಕೆ ನೀಡಿರುತ್ತಾರೆ. ಪ್ರತಿವಾದಿಗಳ ಪರವಾಗಿ ವಕೀಲರು ದಿನಾಂಕ: 22.09.2004ರಂದು ಮೆಮೋ ಸಲ್ಲಿಸಿ ದಿನಾಂಕ:19.03.2002ರಂದು ಈ ನ್ಯಾಯಾಲಯಕ್ಕೆ ಸಲ್ಲಿಸಿದ ಅರ್ಜಿಯನ್ನು ವಜಾ ಮಾಡಲು ಹಾಗೂ ಈ ಪ್ರಕರಣದಲ್ಲಿ ಯಾವುದೇ ಒತ್ತಡವನ್ನು ಅರ್ಜಿದಾರರು ತರುವುದಿಲ್ಲ ಎಂದು ತಿಳಿಸಿರುತ್ತಾರೆ.

ಈ ಮೇಲ್ಕಂಡ ಎಲ್ಲಾ ದಾಖಲಾತಿಗಳನ್ನು ಪರಿಶೀಲಿಸಿ ಈ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡ ವಾಹನದ ಬಗ್ಗೆ ಅಂತಿಮ ಆದೇಶ ಹೊರಡಿಸಲು ಈ ಕೆಳಕಂಡ ಅಂಶಗಳನ್ನು ಪರಿಶೀಲಿಸುವುದು ಅವಶ್ಯಕವಾಗಿದೆ.

**ಅಂಶ-1**

ವಾಹನ ಸುಜುಕಿ ಸಮುರಾಯ್ ಬೈಕ್ ನಂ. ಕೆಎ-18 ಇ-6671ನ್ನು ದಿನಾಂಕ:02.09.2001ರಂದು 22 ಕೆಜಿ ಶ್ರೀಗಂಧದ ಬೇರು ಚೂರುಗಳನ್ನು ಕಳ್ಳ ಸಾಗಾಣಿಕೆಯ ಸಂಬಂಧ ಅಮಾನತ್ತು ಪಡಿಸಿರುವುದಾಗಿ ಹಾಗೂ ಇದರಿಂದ ಅರಣ್ಯ ಅಪರಾದ ಪ್ರಕರಣ ದಾಖಲಾಗಿದೆಯೇ.

**ಅಂಶ-2**

ಅಂಶ-1 ರುಜುವಾತು ಆದಲ್ಲಿ ಸದರಿ ಅಪರಾಧವು ವಾಹನದ ಮಾಲೀಕರಿಗೆ ಅಥವಾ ಅವರ ಪ್ರತಿನಿಧಿಗೆ ಅಥವಾ ವಾಹನ ಚಾರ್ಜ್ ಪಡೆದವರಿಗೆ (ಚಾಲಕರಿಗೆ) ತಿಳುವಳಿಕೆಗೆ ಮತ್ತು ಶಾಮೀಲಾಗಿರದೇ ಅಪರಾಧವಾಗಿದೆ ಎಂಬುದನ್ನು ಡಿಫೆನ್ಸ್ ರವರು ರುಜುವಾತು ಪಡಿಸಿರುವರೇ ಹಾಗೂ ಅವರೆಲ್ಲರೂ ಅಗತ್ಯವಾದ ಮತ್ತು ಸಾಧ್ಯವಾಗಬಹುದಾದ ಎಲ್ಲಾ ರೀತಿಯ ಮುಂಜಾಗ್ರತೆ ಕ್ರಮ ಕೈಗೊಂಡಿರುವರೇ ಎಂದು ರುಜುವಾತು ಪಡಿಸಿರುತ್ತಾರೆಯೇ.

**ಅಂಶ-3**

**ಕಾರಣಗಳು**

**ಅಂಶ-1**

ದಿನಾಂಕ: 02.09.2001ರಂದು ಪೊಲೀಸ್ ನಿರೀಕ್ಷಕರು ತರೀಕೆರೆ ಇವರಿಗೆ ಖಚಿತ ವರ್ತಮಾನದ ಮೇರೆಗೆ ರಾತ್ರಿ 8-00 ಗಂಟೆಯ ಸಮಯದಲ್ಲಿ ತರೀಕೆರೆ ಇಟ್ಟಿಗೆ ಗ್ರಾಮದ ರಸ್ತೆಯಲ್ಲಿ ಇಂಜಿನೀಯರ್ ಬಸವರಾಜಪ್ಪ ಅಡಿಕೆ ತೋಟದ ಹತ್ತಿರ ಪೊಲೀಸ್ ಸಬ್ಇನ್ಸ್‌ಪೆಕ್ಟರ್ ಅಪರಾಧ ವಿಭಾಗ ತರೀಕೆರೆ, ಹೆಚ್‌ಸಿ 22, ಪಿಸಿ 363 ರವರು ಕಾಯುತ್ತಿರುವಾಗ ಎರಡು ಜನ ಅಸಾಮಿಗಳು ಸುಜುಕಿ ಸಮುರಾಯ್ ಬೈಕ್ ನಂ.ಕೆಎ-18 ಇ-6671 ರಲ್ಲಿ ಅಕ್ರಮವಾಗಿ ಶ್ರೀಗಂಧ ಬೇರು ಚಕ್ಕೆ ಒಟ್ಟು 22 ಕೆಜಿ ಯನ್ನು ಸಾಗಾಣಿಕೆ ಮಾಡುತ್ತಿದ್ದನ್ನು ಎರಡು ಜನ ಆರೋಪಿಗಳ ತ್ಯಾಗರಾಜ ಬಿನ್ ಲೇಟ್ ರಾಜಣ್ಣ ಹೆಚ್. ರಂಗಾಪುರ ವಾಸಿ ಹಾಗೂ ಟಿ.ಹೆಚ್. ವೆಂಕಟೇಶ ಬಿನ್ ಹನುಮಂತಪ್ಪ ಹೆಚ್. ರಂಗಾಪುರ ವಾಸಿ ಇವರುಗಳ ಸಮೇತ ಬಂಧಿಸಿ ವಶಪಡಿಸಿಕೊಂಡು ಠಾಣೆ ಮೊ.ನಂ. 195/2001 ಕಲಂ 86, 87, ಕೆಎಫ್ ಆಕ್ಟ್ ಆರ್‌ಡಬ್ಲ್ಯೂ 379 ಐಪಿಸಿ ರೀತ್ಯ ಕೇಸು ದಾಖಲು ಮಾಡಿರುತ್ತಾರೆ ಹಾಗೂ ಪ್ರಕರಣದ ಎಲ್ಲಾ ದಾಖಲಾತಿಗಳನ್ನು ಈ ನ್ಯಾಯಾಲಯಕ್ಕೆ ಒಪ್ಪಿಸಿ ಅರಣ್ಯ ಕಾಯಿದೆ 71 (ಎ) ಪ್ರಕಾರ ಕ್ರಮ ಜರುಗಿಸಲು ಕೋರಿರುತ್ತಾರೆ. ಸದರಿ ಪ್ರಕರಣವನ್ನು ಅರಣ್ಯ ಕಾಯಿದೆ 71(ಎ) ಪ್ರಕಾರ ಕ್ರಮ ಜರುಗಿಸಿ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಹಾಗೂ ಅರಣ್ಯ ಉತ್ಪನ್ನಗಳನ್ನು ಈ ನ್ಯಾಯಾಲಯದಿಂದ ಮುಂದಿನ ಆದೇಶ ನೀಡುವವರೆಗೂ ವಲಯ ಅರಣ್ಯಾಧಿಕಾರಿ ತರೀಕೆರೆರವರ ವಶಕ್ಕೆ ಸುರಕ್ಷತೆಗೆ ನೀಡಿರುತ್ತದೆ.

ಈ ಪ್ರಕರಣದಲ್ಲಿ ಅಭಿಯೋಜನಾ ವತಿಯಿಂದ ಪಿಎಸ್ಐ ಲಿಂಗದಹಳ್ಳಿ ಪೊಲೀಸ್ ಸ್ಟೇಷನ್ ಇವರು ಈ ನ್ಯಾಯಾಲಯದಲ್ಲಿ ಹೇಳಿಕೆ ನೀಡಿದ್ದು ಅವರ ಹೇಳಿಕೆಯಂತೆ, ತರೀಕೆರೆ ನಗರದ ಅಪರಾಧ ವಿಭಾಗದಲ್ಲಿ ಪಿಎಸ್ಐ ಆಗಿ ಕರ್ತವ್ಯ ಮಾಡುತ್ತಿದ್ದೆ, ದಿನಾಂಕ: 02.09.2001ರಂದು ಇನ್ಸ್‌ಪೆಕ್ಟರ್ ರವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಹೆಚ್‌ಸಿ 22, ಪಿಸಿ 363ರನ್ನು ಕರೆದುಕೊಂಡು ಮೋಟರ್ ಸೈಕಲ್ ಮೇಲೆ ಇಟ್ಟಿಗೆ ಗ್ರಾಮದ ಹತ್ತಿರ ಕಾಯುತ್ತಾ ಇರುವಾಗ, ತರೀಕೆರೆ ಕಡೆಯಿಂದ ಮೋಟರ್ ಸೈಕಲ್ ನಲ್ಲಿ 2 ಜನರು ಬರುವುದು ಕಂಡು ಬಂದಿರುತ್ತದೆ ಆಗ ಸಮಯ 8-00 ಗಂಟೆಯಾಗಿತ್ತು ಟಾರ್ಚ್ ಸಹಾಯದಿಂದ ಬರುತ್ತಿದ್ದ ಮೋಟರ್ ಸೈಕಲ್ ಸವಾರನಿಗೆ ನಿಲ್ಲಿಸಲು ಸೂಚನೆ ಕೊಟ್ಟೆವು ಅವರುಗಳು ತಪ್ಪಿಸಿಕೊಂಡು ಹೋಗಲು ಪ್ರಯತ್ನಿಸಿದರು, ಅವರನ್ನು ಹಿಡಿಕೊಂಡೆವು ಮೋಟರ್ ಬೈಕ್‌ನಲ್ಲಿ ತ್ಯಾಗರಾಜ್ ಎಂಬುವನು ಸವಾರನಾಗಿದ್ದು ಮೋಟರ್ ಸೈಕಲ್ ಹಿಂಭಾಗದಲ್ಲಿ ಇನ್ನೊಬ್ಬ ವ್ಯಕ್ತಿ ಇದ್ದು ಇಬ್ಬರ ಮಧ್ಯ ಒಂದು ಗೋಣಿ ಚೀಲ ಕಂಡು ಬಂದಿದ್ದು, ಆತನನ್ನು ಪ್ರಶ್ನಿಸಿದಾಗ ಅವನು ಸಮರ್ಪಕವಾಗಿ ಉತ್ತರ ಕೊಡಲಿಲ್ಲ ಗೋಣಿ ಚೀಲವನ್ನು ಪರಿಶೀಲಿಸಿದಾಗ ಅದರಲ್ಲಿ ಹಳದಿ ಬಣ್ಣದ ಕಿಟ್ ಬ್ಯಾಗಿನಲ್ಲಿ ಶ್ರೀಗಂಧದ ಚೂರುಗಳಿರುವುದು ಕಂಡು ಬಂದಿತು ಮತ್ತು ಕಿಟ್ ಬ್ಯಾಗಿನ ಒಳ ಭಾಗದಲ್ಲಿ ಪ್ಲಾಸ್ಟಿಕ್ ಚೀಲದಲ್ಲಿ ಶ್ರೀಗಂಧದ ಚಕ್ಕೆ ಇರುವುದು ಕಂಡು ಬಂದಿರುತ್ತದೆ. ರಹದಾರಿ ಕೇಳಲಾಗಿ ಯಾವುದು ಇಲ್ಲವೆಂದು ತಿಳಿಸಿದರು. ಪಂಚಾಯಿತಿದಾರರನ್ನು ಕರೆಯಿಸಿಕೊಂಡು ವಿವರವಾದ ಪಂಚನಾಮೆಯನ್ನು ಮಾಡಲಾಯಿತು. 15 ಕೆಜಿ ಚೂರುಗಳು ಮತ್ತು 7 ಕೆಜಿ ಶ್ರೀಗಂಧದ ಚಕ್ಕೆಗಳು ಇದ್ದು ಸದರಿ ಬ್ಯಾಗುಗಳಿಗೆ 1, 2, 3 ಎಂದು ಸಂಖ್ಯೆ ಕೊಡಲಾಯಿತು. ಸದರಿ ಶ್ರೀಗಂಧದ ಚಕ್ಕೆ ಚೂರುಗಳನ್ನು ಮತ್ತು ಮೋಟಾರ್ ಸೈಕಲ್ ವಶಪಡಿಸಿಕೊಳ್ಳಲಾಯಿತು ಮೋಟಾರ್ ಸೈಕಲ್ ಸಂಖ್ಯೆ ಕೆಎ-18 ಇ-6671 ಆಗಿರುತ್ತದೆ. ಆರೋಪಿ ಮತ್ತು ಮೋಟಾರ್ ಸೈಕಲ್ ಶ್ರೀಗಂಧದ ಬೇರು ಚಕ್ಕೆಗಳನ್ನು ಠಾಣೆಗೆ ತಂದು ಸ್ವ ದೂರಿನ ಮೇಲೆ ಕ್ರೈಂ 195/2001 ಕಲಂ ನಂ 86/87 ಕರ್ನಾಟಕ ಅರಣ್ಯ ಆಕ್ಟ್ ಸಂಹಿತೆ ಐಪಿಸಿ 372ರ ಅಡಿಯಲ್ಲಿ ಪ್ರಕರಣ ದಾಖಲಿಸಿಕೊಂಡು ನ್ಯಾಯಾಲಯಕ್ಕೆ ಮತ್ತು ಮೇಲಾಧಿಕಾರಿಗಳಿಗೆ ಕಳುಹಿಸಿ ಕೊಟ್ಟಿರುತ್ತದೆ. ಸ್ಥಳದಲ್ಲಿ ಮಾಡಿದ ಮಹಜರ್‌ನ್ನು ನಿಶಾನೆ ಪಿ-1 ಎಂದು ಸಾಕ್ಷಿದಾರರ ಸಹಿಯನ್ನು ಪಿ1ಎ ಎಂದು ಗುರುತಿಸಲಾಯಿತು. ಎಫ್ಐಆರ್ ನಿಶಾನೆ ಪಿ2 ಆಗಿದ್ದು ಸಹಿ ಪಿ2ಎ ಆಗಿರುತ್ತದೆ.

ಆರೋಪಿಗಳ ವಿರುದ್ದ ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಲಾಯಿತು. ಮೋಟಾರ್ ಸೈಕಲ್ ಮತ್ತು ಶ್ರೀಗಂಧದ ತುಂಡುಗಳನ್ನು ನೋಡಿದರೆ ಗುರುತಿಸುತ್ತೇನೆ. 1ನೇ ಆರೋಪಿ ತ್ಯಾಗರಾಜ್ ಮೇಲೆ ತರೀಕೆರೆ ನ್ಯಾಯಾಲಯದಲ್ಲಿ 3 ಪ್ರಕರಣಗಳು ದಾಖಲಾಗಿರುತ್ತದೆ ಎಂದು ಹೇಳಿಕೆ ನೀಡಿರುತ್ತಾರೆ.

ಅರ್ಜಿದಾರರು ಮತ್ತು ಅರ್ಜಿದಾರರ ಪರ ವಕೀಲರು ಗೈರು ಹಾಜರಾಗಿದ್ದರಿಂದ ಪಾಟೀಸವಾಲು ಏನು ಇಲ್ಲವೆಂದು ಪರಿಗಣಿಸಲಾಯಿತು.

ಮೇಲ್ಕಂಡ ಪಿಡಬ್ಲ್ಯೂ1 ಸಾಕ್ಷಿದಾರರು ನೀಡಿದ ಹೇಳಿಕೆ ಮತ್ತು ಸ್ಥಳ ಮಹಜರ್‌ನಲ್ಲಿರುವ ಎಲ್ಲಾ ಅಂಶಗಳೂ ಒಂದಕ್ಕೊಂದು ತಾಳೇ ಹೊಂದಿದ್ದು ಯಾವುದೇ ವಿರೋಧ ಹೇಳಿಕೆಗಳು ಬಂದಿರುವುದಿಲ್ಲ. ಅಲ್ಲದೇ ಕಾನೂನು ಪ್ರಕಾರ ಎಲ್ಲಾ ದಾಖಲಾತಿಗಳನ್ನು ಸಿದ್ದಪಡಿಸಿ ನ್ಯಾಯಾಲಯಕ್ಕೆ ಹಾಜರುಪಡಿಸಿ ಗುರುತಿಸಿಕೊಂಡಿರುತ್ತಾರೆ ವಾಹನ ಮೋಟರ್ ಸೈಕಲ್ ಸಂಖ್ಯೆ: ಕೆಎ-18 ಇ-6671ರಲ್ಲಿ ಅಕ್ರಮವಾಗಿ ರಹದಾರಿಯಿಲ್ಲದೆ 22 ಕೆಜಿ ಶ್ರೀಗಂಧದ ಚಿಕ್ಕೆ ಬೇರುಗಳು ಸಾಗಾಣಿಕೆ ಆಗಿರುವುದು ಖಚಿತ ಪಡಿಸಿರುತ್ತಾರೆ ಹಾಗೂ ಅರಣ್ಯ ಕಾಯಿದೆ ಉಲ್ಲಂಘನೆ ಮಾಡಿರುವುದನ್ನು ಸಹ ದೃಢಪಡಿಸಿರುತ್ತಾರೆ. ಆದ್ದರಿಂದ ಅಂಶ 1ಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ಅಂಶ-2**

ದಿನಾಂಕ: 19.03.2002ರಂದು ಶ್ರೀ ಎಸ್.ಬಿ. ಪ್ರಸನ್ನಕುಮಾರ್ ತರೀಕೆರೆ ಇವರ ಜಿಪಿಎ ಮಂಜುನಾಥ ಬಿನ್ ಮಲ್ಲಪ್ಪ ತರೀಕೆರೆ ಇವರು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ ತರೀಕೆರೆ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಹಾಗೂ ಸಿಬ್ಬಂದಿಯವರು ಅಮಾನತ್ತುಪಡಿಸಿಕೊಂಡಿರುವ ವಾಹನ ಸುಜುಕಿ ಸಮುರಾಯ್ ಮೋಟರ್ ಸೈಕಲ್ ಕೆಎ-19 ಇ-6671ರ ಮಾಲೀಕನಾಗಿರುತ್ತೇನೆ ಸದರಿ ವಾಹನದಲ್ಲಿ ಯಾವುದೇ ಅರಣ್ಯ ಉತ್ಪನ್ನ ಸಾಗಾಣಿಕೆ ಆಗಿರುವುದಿಲ್ಲ ಪೊಲೀಸ್ ಸಿಬ್ಬಂದಿ ವರ್ಗದವರು ಸುಳ್ಳು ಪ್ರಕರಣ ದಾಖಲು ಮಾಡಿರುತ್ತಾರೆ ಈ ವಾಹನವನ್ನು ಬಿಡುಗಡೆ ಮಾಡಬೇಕಾಗಿ ಕೋರಿರುತ್ತಾರೆ.

ದಿನಾಂಕ:02.04.2001ರಂದು ವಾಹನದ ಮಾಲಿಕರಿಗೆ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ) ಪ್ರಕಾರ ಕಾರಣ ಕೇಳಿ ತಿಳುವಳಿಕೆ ಪತ್ರ ನೀಡಿರುತ್ತದೆ ವಾಹನದ ಮಾಲೀಕರು ದಿನಾಂಕ:29.08.2002ರಂದು ಈ ನ್ಯಾಯಾಲಯದ ನೋಟಿಸಿಗೆ ಸಮಜಾಯಿಸಿ ನೀಡಿ ವಾಹನದಲ್ಲಿ ನಡೆದ ಈ ಪ್ರಕರಣಕ್ಕೂ ತನಗೂ ಯಾವುದೇ ಸಂಬಂಧ ಇರುವುದಿಲ್ಲ ದಯಮಾಡಿ ವಾಹನ ಬಿಡುಗಡೆ ಮಾಡಬೇಕಾಗಿ ಕೋರಿರುತ್ತಾರೆ.

ಫಿರ್ಯಾದಿದಾರರು ಸಲ್ಲಿಸಿದ ದಾಖಲಾತಿಗಳು ಅಭಿಯೋಜನಾವತಿಯಿಂದ ಸಲ್ಲಿಸಿದ ಆಕ್ಷೇಪಣಾ ಪತ್ರ ಹಾಗೂ ಅರ್ಜಿದಾರರು ಸಲ್ಲಿಸಿದ ದಾಖಲಾತಿಗಳನ್ನು ಪರಿಶೀಲಿಸಿ ಈ ಪ್ರಕರಣದಲ್ಲಿ ಅರ್ಜಿದಾರರು ಸಹ ಭಾಗಿ ಆಗಿರುವುದು ಮೇಲು ನೋಟಕ್ಕೆ ಕಂಡು ಬಂದಿರುವುದರಿಂದ ಅವರ ಮಧ್ಯಂತರ ಅರ್ಜಿಯನ್ನು ದಿನಾಂಕ: 21.01.2004ರ ಆದೇಶದಲ್ಲಿ ತಿರಸ್ಕರಿಸಿರುತ್ತದೆ ಈ ಪ್ರಕರಣದಲ್ಲಿ ಅರ್ಜಿದಾರರು ಈ ನ್ಯಾಯಾಲಯದ ಆದೇಶದ ವಿರುದ್ದ ಮೇಲ್ಮನವಿ ಸಲ್ಲಿಸಿರುವುದಿಲ್ಲ.

ಈ ಪ್ರಕರಣದ ಬಗ್ಗೆ ಅರ್ಜಿದಾರರ/ ವಾಹನದ ಮಾಲೀಕರಿಗೆ ದಿನಾಂಕ: 02.06.2004, 23.06.2004, 14.07.2004, 04.08.2004, 25.08.2004, 15.09.2004, 06.10.2004 ವಿವಿಧ ದಿನಾಂಕಗಳಂದು ನೋಟೀಸ್ ಕಳುಹಿಸಿ ನ್ಯಾಯಾಲಯಕ್ಕೆ ಹಾಜರಾಗಲು ಸೂಚಿಸಿರುತ್ತದೆ. ವಾಹನದ ಮಾಲೀಕರು ಒಂದು ವಿಚಾರಣೆಗೂ ಸಹ ಹಾಜರಾಗದೇ ಗೈರು ಹಾಜರಾಗಿರುತ್ತಾರೆ ಅಲ್ಲದೇ ದಿನಾಂಕ: 22.09.2004 ರಂದು ಈ ನ್ಯಾಯಾಲಯಕ್ಕೆ ವಕೀಲರ ಮುಖಾಂತರ ಮೆಮೋ ಸಲ್ಲಿಸಿ ಈ ಪ್ರಕರಣದ ಬಗ್ಗೆ ಯಾವುದೇ ಒತ್ತಡ ಇರುವುದಿಲ್ಲ ಅರ್ಜಿದಾರರ ಅರ್ಜಿಯನ್ನು ವಜಾ ಮಾಡಬೇಕಾಗಿ ವಿನಂತಿಸಿರುತ್ತಾರೆ.

ಅರ್ಜಿದಾರರ ವಾಹನದಲ್ಲಿ ಅರಣ್ಯ ಉತ್ಪನ್ನವಾದ ಶ್ರೀಗಂಧದ ತುಂಡುಗಳು ಸಾಗಾಣಿಕೆಗೆ ಬಳಕೆಯಾಗದಂತೆ ವಾಹನದ ಮಾಲೀಕರು ಅಥವಾ ಅವರ ಪ್ರತಿನಿಧಿಗಳು ಯಾವುದೇ ಮುನ್ನೆಚ್ಚರಿಕೆ ವಹಿಸಿದ ಬಗ್ಗೆ ಸಮರ್ಪಕವಾಗಿ ಸಾಕ್ಷ್ಯಾಧಾರ ನೀಡಿರುವುದಿಲ್ಲ, ವಾಹನದಲ್ಲಿ ತನ್ನ ಗಮನಕ್ಕೆ ಬಾರದಂತೆ ಈ ಕೃತ್ಯ ನಡೆದಿದೆ ಎಂಬುದನ್ನು ಕರ್ನಾಟಕ ಅರಣ್ಯ ಕಾಯಿದೆ ಕಲಂ 71(ಬಿ) (2)ರ ರೀತ್ಯ ಸಾಬೀತು ಪಡಿಸುವ ಜವಾಬ್ದಾರಿ ವಾಹನದ ಮಾಲೀಕರಿಗೆ ಸೇರಿದ್ದಾಗಿರುತ್ತದೆ. ಅಲ್ಲದೇ ವಾಹನದ ಮಾಲೀಕರ ಏಜೆಂಟರಾಗಲೀ ಚಾಲಕನಾಗಲೀ ಅಥವಾ ಇತರೆ ನಂಬಿಕೆ ಪ್ರತಿನಿಧಿಗಳು ವಾಹನಗಳಲ್ಲಿ ಅಕ್ರಮ ಸಾಗಾಣಿಕೆಯಾಗದಂತೆ ಮುನ್ನೆಚ್ಚರಿಕೆ ವಹಿಸುವುದು ಸಹ ಇವರುಗಳ ಜವಾಬ್ದಾರಿಯಾಗಿರುತ್ತದೆ.

"Without prejudice to the provisions of sub-section (1), no order confiscating any tool, rope, chain, boat, vehicle or cattle shall be made under section 71A if the owner of the tool, rope, chain, boat, vehicle or cattle proves to the satisfaction of the authorised officer that it was used in carrying the timber, sandalwood, charcoal, firewood or ivory without the knowledge or connivance of the owner himself, his agent, if any, and the person in charge of the tool, rope, chain, boat, vehicle or cattle and that each of them had taken all reasonable and necessary precautions against such use."

ಸುಜುಕಿ ಮೋಟರ್ ಸೈಕಲ್ ಕೆಎ-18 ಇ-6671ರ ವಾಹನದಲ್ಲಿ ಅರಣ್ಯ ಉತ್ಪನ್ನವು ಕಾನೂನು ಬಾಹಿರವಾಗಿ ಸಾಗಿಸದಂತೆ ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿದ್ದೇವೆ ಎಂಬುದನ್ನು ಸಾಕ್ಷಿ ಹಾಗೂ ಪುರಾವೆಗಳ ಸಹಿತ ಈ ಪ್ರಕರಣದಲ್ಲಿ ಸಾಬೀತು ಪಡಿಸಲು ವಾಹನದ ಮಾಲೀಕರು ಹಾಗೂ ಅವರ ಪರ ವಕೀಲರು ಸಂಪೂರ್ಣ ವಿಫಲಗೊಂಡಿರುತ್ತಾರಾದ್ದರಿಂದ ಪ್ರಕರಣದ ವಾಹನವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ. ಹಾಲಿ ಪ್ರಕರಣಕ್ಕೆ ಕೇರಳ ರಾಜ್ಯದ ತೀರ್ಮಾನ ಕ್ರೈಮ್ಸ್ 2000 (3) ಪುಟ 563 ಅತ್ಯಂತ ಸರಿಹೊಂದುವಂತಹ ತೀರ್ಮಾನ ಆಗಿರುತ್ತದೆ ಅದರ ಉದ್ದೃತ ಭಾಗ ಈ ಕೆಳಕಂಡಂತಿದೆ.

"The contention that such a strict view would adversely affect an innocent vehicle owner cannot be countenanced since any narrow or liberal interpretation of confiscatory provisions in the Act can eventually lead to disastrous consequences for forest wealth which is a very endangered bounty of nature. The idea behind extension of confiscatory provisions to vehicles etc., is to convey a pre-emptory and explicit message to the vehicle owners not to allow their vehicles to be used for depletion of forest wealth. If any vehicle is caught in the nefarious act of carrying illicit forest produce, it is not enough that the owner establishes his innocence alone. If he wants to retrieve his vehicle he must show further that the person who was in-charge of the vehicle has taken reasonable and necessary precautionary measures against such user of the vehicle. The owner cannot rest with establishing his innocence in the matter. It may be that having succeeded in showing his Innocence his failure to establish the next limb might lead to hard consequences to him. Legislature intended, by providing such stringent conditions, to prevent harder consequences for the society and for the posterity."

ಕರ್ನಾಟಕ ಅರಣ್ಯ ಕಾಯಿದೆ ಕಲಂ 80 ರ ಪ್ರಕಾರ ಯಾವುದೇ ಅರಣ್ಯ ಉತ್ಪನ್ನಗಳು ಅರಣ್ಯ ಪ್ರಕರಣದಲ್ಲಿ ಪ್ರಾಥಮಿಕ ಹಂತದಲ್ಲಿ ಸರ್ಕಾರದಂದೇ ಭಾವಿಸಬೇಕಾಗಿದ್ದು ಆಪಾದನೆ ಹೊರಿಸಲ್ಪಟ್ಟ ವ್ಯಕ್ತಿ ಅಮಾನತ್ತು ಪಡಿಸಿಕೊಂಡ ಮರವು ತನಗೆ ಸೇರಿದೆ ಎಂಬುದನ್ನು ಪುರಾವೆ ಮಾಡಲು ಹೊಣೆಯನ್ನು ಹೊರಬೇಕಾಗಿರುತ್ತದೆ.

"When in any proceedings taken under this Act or in consequence of anything done under this Act or under any other law for the time being in force, a question arises as to whether any forest produce is the property of the State Government, such produce shall be presumed to be the property of the State Government until the contrary is proved, and in case of any prosecution the burden of proving the contrary shall lie on the accused."

ಅರಣ್ಯ ಕಾಯಿದೆ 1963 ಕಲಂ 84ರ ಪ್ರಕಾರ ಶ್ರೀಗಂಧವು ಸರ್ಕಾರದ ಸ್ವತ್ತಾಗಿರುತ್ತದೆ.

(1) all Sandal trees which maygrow in any land after the date of the commencement of this Act, and

(2) all Sandal trees existing on any land prior to the commencement of the Act. 2(***) shall be the exclusive property of the State Government.

3. (2) Where in any proceedings taken under this Act, a question arises as to whether any sandalwood is the property of the State Government, it shall, until the contrary is proved, be presumed to be the part of a sandal tree which was the exclusive property of the State Government under sub-section (1), and in the case of any prosecution, the burden of proving the contrary shall lie on the accused.

ಈ ಪ್ರಕರಣದಲ್ಲಿ ವಾಹನದ ಮಾಲೀಕರು ನ್ಯಾಯಾಲಯಕ್ಕೆ ಹಾಜರಾಗಲು ಸೂಚಿಸಿದರು ಸಹ ಹಾಜರಾಗದೇ ನ್ಯಾಯಾಲಯದ ಆದೇಶವನ್ನು ಉಲ್ಲಂಘನೆ ಮಾಡಿರುತ್ತಾರೆ ಅಲ್ಲದೇ, ಈ ಪ್ರಕರಣಕ್ಕೆ ಸಂಬಂಧಿಸಿದ ಮೇಲ್ಕಂಡ ವಾಹನದ ಬಿಡುಗಡೆಗೆ ಸಲ್ಲಿಸಿದ ಅರ್ಜಿಯನ್ನು ವಜಾಮಾಡಬೇಕಾಗಿ ವಿನಂತಿಸಿರುತ್ತಾರೆ ಮತ್ತು ಈ ವಾಹನದ ಬಗ್ಗೆ ಯಾವುದೇ ಆಸಕ್ತಿಯಿಲ್ಲವೆಂದು ತಿಳಿಸಿರುವುದರಿಂದ ಸುಜುಕಿ ಮೋಟರ್ ಸೈಕಲ್ ನಂ. ಕೆಎ-18 ಇ-6671ರ ಮಾಲೀಕರೇ ನೇರವಾಗಿ ಅರಣ್ಯ ಉತ್ಪನ್ನ ಅಕ್ರಮ ಸಾಗಾಣಿಕೆಗೆ ಬಳಸಿರುವುದು ಈ ಪ್ರಕರಣದ ವಿಚಾರಣೆಯಿಂದ ಹಾಗೂ ದಾಖಲಾತಿಗಳ ಪರಿಶೀಲನೆಯಿಂದ ದೃಢಪಟ್ಟಿರುತ್ತದೆ ಆದ್ದರಿಂದ ಅಂಶ 2ನ್ನು ಇಲ್ಲ ಎಂದು ಪರಿಗಣಿಸಲಾಯಿತು.

**ಅಂತಿಮ ಆದೇಶ**

ಮೇಲ್ಕಾಣಿಸಿದ ಎಲ್ಲಾ ಅಂಶಗಳನ್ನು ಕೂಲಂಕುಶವಾಗಿ ಪರಿಶೀಲಿಸಿ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀಮತಿ ಸೀಮಾಗರ್ಗ್ ಭಾಅಸೇ., ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಭದ್ರಾವತಿ ವಿಭಾಗ ಆದ ನಾನು ಅರಣ್ಯ ಕಾಯಿದೆ 1963 ಸೆಕ್ಷನ್ 71ಎ (2)ನೇ ತಿದ್ದುಪಡಿ ಪ್ರಕಾರ ಆಟೋರಿಕ್ಷಾ ನೋಂದಾವಣೆ ಸಂಖ್ಯೆ: ಕೆಎ-18 ಇ-6671 (ಇಂಜಿನ್ ನಂ.7502-ಎಂ-530859, ಛಾಸೀಸ್ ನಂ. 7502 ಎಫ್ 488071 ಮತ್ತು ಅದರಲ್ಲಿ ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿದ್ದ ಶ್ರೀಗಂಧದ ಬೇರು ಚೂರು ಒಟ್ಟು 22 ಕೆಜಿ ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶ ಹೊರಡಿಸಿರುತ್ತದೆ.

ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವುದಾದಲ್ಲಿ ಈ ಆದೇಶ ಹೊರಡಿಸಿದ 30 ದಿವಸಗಳೊಳಗೆ ಸಲ್ಲಿಸಬಹುದಾಗಿದೆ. ತಪ್ಪಿದಲ್ಲಿ ಇದೇ ಅಂತಿಮ ಆದೇಶವಾಗಿ, ಊರ್ಜಿತಗೊಳಿಸುತ್ತದೆ ಅಲ್ಲದೇ ಮೇಲ್ಕಂಡ ಅವಧಿ ಮೀರಿದ ಬಳಿಕ ಮೇಲ್ಕಂಡ ವಾಹನ ಹಾಗೂ ಶ್ರೀಗಂಧದ ಬೇರು ಚೂರುಗಳನ್ನು ಕಾನೂನು ರೀತ್ಯ ವಿಲೇ ಮಾಡಲು ಕೂಡ ಆದೇಶಿಸಿದೆ.

ಈ ಆದೇಶವನ್ನು ಈ ದಿನ ದಿನಾಂಕ: 29.10.2004ರಂದು ನ್ಯಾಯಾಲಯದ ಮೊಹರು ಹಾಗೂ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

ಅಧಿಕಾರಿಯುತ ಅಧಿಕಾರಿಗಳು ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಭದ್ರಾವತಿ ವಿಭಾಗ, ಭದ್ರಾವತಿ.

**ಅನುಬಂಧ**

**ಅಭಿಯೋಜನಾ ಪರ ಸಾಕ್ಷಿಗಳ ವಿಚಾರಣೆ**

1. ಪಿಡಬ್ಲ್ಯೂ 1 ಬಿ.ಎಂ. ಖಾಸೀಂ ಪಿಎಸ್ಐ ಲಿಂಗದಹಳ್ಳಿ ಪೊಲೀಸ್ ಸ್ಟೇಷನ್ (ದಿನಾಂಕ:23.06.2004)

**ಅಭಿಯೋಜನಾ ಪರ ದಾಖಲಾತಿಗಳ ಪರಿಶೀಲನೆ**

1. ಪಿ1 ಸ್ಥಳ ಮಹಜರ್
2. ಪಿ1ಎ ಪಿಡಬ್ಲ್ಯೂ 1 ಸಾಕ್ಷಿದಾರರ ಸಹಿ
3. ಪಿ2 ಪ್ರಥಮ ಮಾಹಿತಿ ವರದಿ
4. ಪಿ2ಎ ಫಿರ್ಯಾದಿದಾರರ ಸಹಿ

**ಎಕ್ಸಿಬಿಟ್-1**

ಅರ್ಜಿದಾರರು ವಾಹನದ ತಾತ್ಕಾಲಿಕ ಬಿಡುಗಡೆಗೆ ಸಲ್ಲಿಸಿದ ಅರ್ಜಿ 19.03.2002

**ಎಕ್ಸಿಬಿಟ್ 2**

ಮಧ್ಯಂತರ ಅರ್ಜಿಯ ಬಗ್ಗೆ ಆದೇಶ ದಿನಾಂಕ:21.01.2004

**ಎಕ್ಸಿಬಿಟ್ 3**

ವಾಹನದ ಬಿಡುಗಡೆ ಕೋರಿ ಸಲ್ಲಿಸಿದ ಅರ್ಜಿಯನ್ನು ವಜಾಗೊಳಿಸಲು ವಕೀಲರ ಮುಖಾಂತರ ಸಲ್ಲಿಸಿದ ಮೆಮೋ ದಿನಾಂಕ:14-07-2004 ಹಾಗೂ 29.09.2004.

**ಪ್ರತಿವಾದಿಗಳ ಪರ ಸಾಕ್ಷಿಗಳ ವಿಚಾರಣೆ**

ಯಾವುದು ಇರುವುದಿಲ್ಲ.

ಅಧಿಕಾರಿಯುತ ಅಧಿಕಾರಿಗಳು ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಭದ್ರಾವತಿ ವಿಭಾಗ, ಭದ್ರಾವತಿ.

ಪಿ.ಆರ್. 1658

**ಜಿಲ್ಲಾಧಿಕಾರಿಯವರ ಕಛೇರಿ, ಉಡುಪಿಜಿಲ್ಲೆ, ಉಡುಪಿ**

**ಅಧಿಸೂಚನೆ**

**ಸಂಖ್ಯೆ: ಡಿಡಿಸ್ ಆರ್‌ಟಿಎ ಸಿಆರ್/ 93/2004-05, ದಿನಾಂಕ:25ನೇ ಅಕ್ಟೋಬರ್, 2004**

ಕಾರ್ಯಪಾಲಕ ಇಂಜಿನಿಯರ್ ಲೋಕೋಪಯೋಗಿ ಇಲಾಖೆ ವಿಭಾಗ, ಉಡುಪಿ ರವರು ತಮ್ಮ ಪತ್ರ ಸಂಖ್ಯೆ: ಲೋಇಉವಿ: ಸೇತುವೆ: ಇತರೆ 2004-05 ಜೇ೩/2108 ದಿನಾಂಕ: 03.08.2004ರ ಪತ್ರದಲ್ಲಿ ಉಡುಪಿ ಜಿಲ್ಲೆಯಲ್ಲಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ರಾಜ್ಯ ಹೆದ್ದಾರಿ, ಇತರ ಜಿಲ್ಲಾ ಮುಖ್ಯ ರಸ್ತೆಗಳಲ್ಲಿ ನಿಗದಿಪಡಿಸಲಾದ ಭಾರಕ್ಕಿಂತ ಹೆಚ್ಚಿನ ಭಾರವನ್ನು ಹೊತ್ತು ಸಾಗುವ ಫೇರೋಮ್ಯಾಂಗನೀಸ್ ಅದಿರು ತುಂಬಿದ ಲಾರಿಗಳಿಂದ ರಸ್ತೆ ಹಾಗೂ ಸೇತುವೆಗಳು ಹಾನಿಗೊಂಡಿರುವುದನ್ನು ಗಮನಿಸಲಾಗಿದ್ದು, ದಿನಾಂಕ: 29.07.2004ರಂದು ಬ್ರಹ್ಮಾವರ ಜನ್ನಾಡಿ ರಸ್ತೆಯ ಕಿ.ಮೀ. 2.20 ರಲ್ಲಿ ನಿರ್ಮಿಸಲಾದ ಸೇತುವೆ ಸುಮಾರು 40 ಟನ್ ಭಾರದ ಫೆರೋ ಮ್ಯಾಂಗನೀಸ್ ಅದಿರು ತುಂಬಿದ ಲಾರಿಗಳು ಹಾದು ಹೋದ್ದರಿಂದ ಸೇತುವೆಯ ಚಾವಣಿಯು ಕುಸಿದು ಸಂಚಾರಕ್ಕೆ ತೊಂದರೆಯಾಗಿರುತ್ತದೆ.

ಸಾಮಾನ್ಯವಾಗಿ ಈ ರಸ್ತೆ ಮತ್ತು ಮೋರಿಗಳು ಹತ್ತು ಟನ್ ಹಾಗೂ ಸೇತುವೆ 20 ಟನ್ ಭಾರ ಹೊರುವ ಸಾಮರ್ಥ್ಯವನ್ನು ಹೊಂದಿದ್ದು, ಮ್ಯಾಂಗನೀಸ್ ಅದಿರು ತುಂಬಿದ ಲಾರಿಗಳು 40 ಟನ್ ಗೂ ಅಧಿಕ ಭಾರವಿರುವುದರಿಂದ ರಸ್ತೆಗಳು ಸೇತುವೆಗಳು ಹಾನಿಗೊಳ್ಳುವ ಸಂಭವವಿರುವುದರಿಂದ ಸಾರ್ವಜನಿಕ ಹಿತದೃಷ್ಟಿಯಿಂದ ಫೆರೋ ಮ್ಯಾಂಗನೀಸ್ ಅದಿರು ತುಂಬಿದ ಲಾರಿಗಳ ಸಂಚಾರವನ್ನು ನಿಷೇಧಿಸಿ ಆದೇಶ ಹೊರಡಿಸಲು ಕೋರಿರುವ ಮೇರೆಗೆ ಆರು (6) ಜಿಲ್ಲಾ ಮುಖ್ಯರಸ್ತೆಗಳಲ್ಲಿ ಹಾಗೂ ಎರಡು (2) ರಾಜ್ಯ ಹೆದ್ದಾರಿ ರಸ್ತೆಗಳಲ್ಲಿ ಫೆರೋ ಮ್ಯಾಂಗನೀಸ್ ಅದಿರು ತುಂಬಿದ ಲಾರಿಗಳ ಸಂಚಾರವನ್ನು ಮಾತ್ರ ದಿನಾಂಕ: 05.08.2004ರಿಂದ ಸಂಪೂರ್ಣವಾಗಿ ನಿಷೇಧಿಸಿ ಅಧಿಸೂಚನೆ ಹೊರಡಿಸಲಾಗಿದ್ದು. ಸದ್ರಿ ಅಧಿಸೂಚನೆಯಲ್ಲಿ ತ್ರಾಸಿ-ಗಂಗೊಳ್ಳಿ ಜಿಲ್ಲಾ ಮುಖ್ಯ ರಸ್ತೆಯು ಕೈಬಿಟ್ಟು ಹೋಗಿರುವುದರಿಂದ ಮತ್ತು ಸಾಮಾನ್ಯವಾಗಿ ರಸ್ತೆ ಮತ್ತು ಮೋರಿಗಳು 10 ಟನ್. ಸೇತುವೆಗಳು 20 ಟನ್ ಭಾರ ಹೊರುವ ಸಾಮರ್ಥ್ಯವನ್ನು ಹೊಂದಿರುವುದರಿಂದ ರಸ್ತೆ ಮತ್ತು ಮೋರಿಗಳನ್ನು ಸಂರಕ್ಷಿಸುವುದು ಅತೀ ಅಗತ್ಯವಾಗಿರುವುದರಿಂದ ಈ ಕೆಳಗಿನ ರಸ್ತೆಗಳಲ್ಲಿ ನೊಂದಾಯಿಸಿದ ಸರಕು ತೂಕ (ಆರ್‌ಎಲ್‌ಡಬ್ಲ್ಯೂ) ಗರಿಷ್ಠ 16.20 ಟನ್ ಗಿಂತ ಅಧಿಕ ಭಾರದ ಸರಕು ಸಾಗಣೆ ವಾಹನಗಳ ಸಂಚಾರವನ್ನು ನಿಷೇಧಿಸಿ ಅಧಿಸೂಚನೆ ಹೊರಡಿಸುವುದು ಅಗತ್ಯವೆಂದು ಮನಗಂಡು ದಿನಾಂಕ: 05.08.2004ರ ಅಧಿಸೂಚನೆಯನ್ನು ತಿದ್ದುಪಡಿ ಮಾಡಿ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಈ ಮೇಲಿನ ಎಲ್ಲಾ ವಿಷಯಗಳನ್ನು ಗಮನದಲ್ಲಿಟ್ಟುಕೊಂಡು ಸಾರ್ವಜನಿಕ ಹಿತದೃಷ್ಟಿಯಿಂದ ಟಿ. ಶಾಮಭಟ್, ಭಾ.ಆ.ಸೇ. ಜಿಲ್ಲಾ ದಂಡಾಧಿಕಾರಿ, ಉಡುಪಿ ಜಿಲ್ಲೆ, ಆದ ನಾನು ಮೋಟಾರು ವಾಹನ ಕಾಯ್ದೆ 1988ರ ಕಲಂ 115ರಂತೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ದಿನಾಂಕ: 05.08.2004ರಂದು ಹೊರಡಿಸಿದ ಅಧಿಸೂಚನೆಯನ್ನು ಪರಿಷ್ಕರಿಸಿ ಲೋಕೋಪಯೋಗಿ ಇಲಾಖೆಯ ಶಿಫಾರಸಿನಂತೆ ಈ ಕೆಳಗಿನ ರಸ್ತೆಗಳಲ್ಲಿ ನೊಂದಾಯಿಸಿದ ಸರಕು ತೂಕ (ಆರ್‌ಎಲ್‌ಡಬ್ಲ್ಯೂ) ಗರಿಷ್ಟ 16.20 ಟನ್‌ಗಿಂತ ಅಧಿಕ ಭಾರದ ಸರಕು ಸಾಗಣೆ ವಾಹನಗಳ ಸಂಚಾರವನ್ನು ಈ ಅಧಿಸೂಚನೆಯ ದಿನಾಂಕದಿಂದ ಸಂಪೂರ್ಣವಾಗಿ ನಿಷೇಧಿಸಿ ಈ ಅಧಿಸೂಚನೆ ಹೊರಡಿಸಿರುತ್ತೇನೆ.

ಸಂಚಾರ ನಿಷೇಧಿಸಿದ ಜಿಲ್ಲಾ ಮುಖ್ಯ ರಸ್ತೆಗಳು:

| | | |
|---|---|---|
| 1. | ಕೋಟ- ಗೋಳಿಯಂಗಡಿ ರಸ್ತೆ | ಕಿ.ಮೀ. 0-00 ರಿಂದ 26-60 |
| 2. | ಸೀತಾ ನದಿ- ಬ್ರಹ್ಮಾವರ ರಸ್ತೆ | ಕಿ.ಮೀ. 10-50 ರಿಂದ 35-00 |
| 3. | ಬ್ರಹ್ಮಾವರ-ಜನ್ನಾಡಿ ರಸ್ತೆ | ಕಿ.ಮೀ. 0-00 ರಿಂದ 19-40 |
| 4. | ಬಾರ್ಕೂರು- ಹೆಬ್ಬಾಡಿ ರಸ್ತೆ | ಕಿ.ಮೀ. 0-00 ರಿಂದ 11-20 |
| 5. | ಸೋಮೇಶ್ವರ-ಕೋಟೇಶ್ವರ ರಸ್ತೆ | ಕಿ.ಮೀ. 27-60 ರಿಂದ 33-00 |
| 6. | ಸೌಡ-ಸಿದ್ದಾಪುರ ರಸ್ತೆ | ಕಿ.ಮೀ. 2-40 ರಿಂದ 11-90 |
| 7. | ತ್ರಾಸಿ- ಗಂಗೊಳ್ಳಿ ರಸ್ತೆ | |
| **ರಾಜ್ಯ ಹೆದ್ದಾರಿಗಳು** | | |
| 8. | ತೀರ್ಥಹಳ್ಳಿ-ಕುಂದಾಪುರ ರಸ್ತೆ | ಕಿ.ಮೀ. 42-00 ರಿಂದ 84-00 |
| 9. | ವಿರಾಜಪೇಟೆ- ಬೈಂದೂರು ರಸ್ತೆ | ಕಿ.ಮೀ. 313-90 ರಿಂದ 317-90 |

ಈ ಅಧಿಸೂಚನೆಯು ದಿನಾಂಕ: 25.10.2004 ರಿಂದ ಮುಂದಿನ ಆದೇಶ ಹೊರಡಿಸುವವರೆಗೆ ಜಾರಿಯಲ್ಲಿರುತ್ತದೆ.

ಈ ಅಧಿಸೂಚನೆಯನ್ನು ನನ್ನ ಸ್ವಹಸ್ತ ಸಹಿ ಹಾಗೂ ಮುದ್ರೆಯೊಂದಿಗೆ ಹೊರಡಿಸಿರುತ್ತೇನೆ.

ಉಡುಪಿ ಜಿಲ್ಲಾ ದಂಡಾಧಿಕಾರಿ ಹಾಗೂ
ಪಿ.ಆರ್. 1661 ಜಿಲ್ಲಾಧಿಕಾರಿ, ಉಡುಪಿಜಿಲ್ಲೆ, ಉಡುಪಿ.

**ಜಿಲ್ಲಾಧಿಕಾರಿಯವರ ಕಛೇರಿ, ಉಡುಪಿಜಿಲ್ಲೆ, ಉಡುಪಿ**

**ಅಧಿಸೂಚನೆ**

**ಸಂಖ್ಯೆ: ಡಿಡಿಸ್ ಆರ್‌ಟಿಎ ಸಿಆರ್/ 101/2004-05, ದಿನಾಂಕ:22ನೇ ನವೆಂಬರ್, 2004**

ಕಾರ್ಯಪಾಲಕ ಇಂಜಿನಿಯರ್ ಲೋಕೋಪಯೋಗಿ ಇಲಾಖೆ ಉಡುಪಿ ವಿಭಾಗದವರು ತಮ್ಮ ಪತ್ರ ಸಂಖ್ಯೆ: ಲೋಇ:ಉವಿರಸ್ತೆ: ಇತರೆ: ಸಿಆರ್ 2004-05 ಜೇ೩ ರಲ್ಲಿ ಉಡುಪಿ ಜಿಲ್ಲೆಯಲ್ಲಿ ಲೋಕೋಪಯೋಗಿ ಇಲಾಖೆ, ಉಡುಪಿ ವಿಭಾಗದ ವ್ಯಾಪ್ತಿಯಲ್ಲಿನ ಕೆಲವೊಂದು ರಾಜ್ಯ ಹೆದ್ದಾರಿ, ಜಿಲ್ಲಾ ಮುಖ್ಯ ರಸ್ತೆಗಳು ಹಾಗೂ ಇದರಲ್ಲಿನ ಮೋರಿ, ಸೇತುವೆಗಳು ಮ್ಯಾಂಗನೀಸ್ ಅದಿರಿನ ಅಧಿಕ ಭಾರ ಹೊತ್ತ ವಾಹನಗಳ ಸಂಚಾರದಿಂದ ಹಾನಿಗೊಳ್ಳುತ್ತಿರುವುದನ್ನು ಗಮನಿಸಲಾಗಿದ್ದು, ಅಲ್ಲದೆ ತೀರ್ಥಹಳ್ಳಿ ಕುಂದಾಪುರ ರಸ್ತೆಯ 75ನೇ ಕಿ.ಮೀ. ನಲ್ಲಿನ ಕಂಡ್ಲೂರು ಸೇತುವೆಯ ಚಾವಣಿಯು ತಳ ಭಾಗದಲ್ಲಿ ಹಾನಿಯಾಗಿರುವುದನ್ನು ವರದಿ ಮಾಡಲಾಗಿದ್ದು, ಮ್ಯಾಂಗನೀಸ್ ಅದಿರು ಸಾಗಿಸುವ ವಾಹನಗಳ ಸಂಚಾರವನ್ನು ನಿಯಂತ್ರಿಸದಿದ್ದಲ್ಲಿ ಮುಂದಕ್ಕೆ ಭಾರಿ ಪ್ರಮಾಣದ ಹಾನಿಗೆ ಎಡೆ ಕೊಟ್ಟಂತಾಗುವುದರಿಂದ ಜಿಲ್ಲೆಯಲ್ಲಿನ ರಾಜ್ಯ ಹೆದ್ದಾರಿ ಹಾಗೂ ಜಿಲ್ಲಾ ಮುಖ್ಯ ರಸ್ತೆಗಳಲ್ಲಿ ಅಧಿಕ ಭಾರ ಸಾಗಿಸುತ್ತಿರುವ ವಾಹನಗಳ ಸಂಚಾರವನ್ನು ನಿರ್ಬಂಧಗೊಳಿಸಲು ಕೋರಿರುತ್ತಾರೆ.

ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ಉಡುಪಿ ವಿಭಾಗ ರವರ ಪತ್ರದಲ್ಲಿನ ತಾಂತ್ರಿಕ ಅಂಶಗಳನ್ನು ಪರಿಶೀಲಿಸಲಾಗಿದೆ. ಜಿಲ್ಲೆಯಲ್ಲಿ ರಸ್ತೆ ಸಂಪರ್ಕ ಅತೀ ಪ್ರಾಮುಖ್ಯವಾಗಿದ್ದು, ಸಂಪರ್ಕ ಕಡಿದು ಹೋದಲ್ಲಿ ಅದರಿಂದ ಉಂಟಾಗುವ ಪರಿಣಾಮಗಳು ಅನೇಕ ರೀತಿಯದ್ದಾಗಿದೆ. ಜಿಲ್ಲೆಯಲ್ಲಿನ ರಸ್ತೆಗಳು ಸೇತುವೆಗಳು ಬಹಳ ಹಿಂದೆ ಸೀಮಿತ ಭಾರವನ್ನು ಹೊರುವ ಉದ್ದೇಶದಿಂದ ನಿರ್ಮಾಣಗೊಂಡಿದ್ದಾಗಿದ್ದು. ಜಿಲ್ಲೆಯಲ್ಲಿನ ರಸ್ತೆ, ಸೇತುವೆಗಳನ್ನು ಸಂರಕ್ಷಿಸುವುದು ಅತೀ ಅಗತ್ಯವಾಗಿದ್ದು, ಹಾಗೂ ಈ ಬಗ್ಗೆ ಜಿಲ್ಲೆಯಾದ್ಯಂತ ತೀವ್ರ ರೀತಿಯ ಪ್ರತಿಭಟನೆಗಳು ಜರುಗುತ್ತಿದ್ದು, ಜಿಲ್ಲೆಯಲ್ಲಿ ಕಾನೂನು ಸುವ್ಯವಸ್ಥೆಗೆ ಭಂಗ ತರುವ ಪರಿಸ್ಥಿತಿ ಉಂಟಾಗಿರುವುದನ್ನು ಮನಗಾಣಲಾಗಿದೆ. ಇದರಿಂದಾಗಿ ಜಿಲ್ಲೆಯ ಎಲ್ಲಾ ರಾಜ್ಯ ಹೆದ್ದಾರಿ ಮತ್ತು ಜಿಲ್ಲಾ ಮುಖ್ಯ ರಸ್ತೆಗಳಲ್ಲಿ ಮ್ಯಾಂಗನೀಸ್ ಅದಿರು ತುಂಬಿದ ವಾಹನಗಳ ಸಂಚಾರವನ್ನು ನಿಷೇಧಿಸುವುದು ಅಗತ್ಯವೆಂದು ಮನಗಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಈ ಮೇಲಿನ ಎಲ್ಲಾ ವಿಷಯಗಳನ್ನು ಗಮನದಲ್ಲಿಟ್ಟುಕೊಂಡು ಸಾರ್ವಜನಿಕ ಹಿತದೃಷ್ಟಿಯಿಂದ ಟಿ. ಶಾಮಭಟ್, ಭಾ.ಆ.ಸೇ. ಜಿಲ್ಲಾ ದಂಡಾಧಿಕಾರಿ, ಉಡುಪಿ ಜಿಲ್ಲೆ, ಆದ ನಾನು ಮೋಟಾರು ವಾಹನ ಕಾಯ್ದೆ 1988ರ ಕಲಂ 115ರಂತೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಲೋಕೋಪಯೋಗಿ ಇಲಾಖೆಯ ಶಿಫಾರಸ್ಸಿನಂತೆ ಉಡುಪಿ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಎಲ್ಲಾ ರಾಜ್ಯ ಹೆದ್ದಾರಿ ಹಾಗೂ ಎಲ್ಲಾ ಜಿಲ್ಲಾ ಮುಖ್ಯ ರಸ್ತೆಗಳಲ್ಲಿ ಮ್ಯಾಂಗನೀಸ್ ಅದಿರು ತುಂಬಿದ ಲಾರಿಗಳ ಸಂಚಾರವನ್ನು ಈ ಅಧಿಸೂಚನೆಯ ದಿನಾಂಕದಿಂದ ಸಂಪೂರ್ಣವಾಗಿ ನಿಷೇಧಿಸಿ ಅಧಿಸೂಚನೆ ಹೊರಡಿಸಿರುತ್ತೇನೆ.

ಈ ಅಧಿಸೂಚನೆಯು ದಿನಾಂಕ: 22.11.2004ರಿಂದ ಮುಂದಿನ ಆದೇಶ ಹೊರಡಿಸುವವರೆಗೆ ಜಾರಿಯಲ್ಲಿರುತ್ತದೆ.

ಈ ಅಧಿಸೂಚನೆಯನ್ನು ನನ್ನ ಸ್ವ ಹಸ್ತ ಸಹಿ ಹಾಗೂ ಮುದ್ರೆಯೊಂದಿಗೆ ಹೊರಡಿಸಿರುತ್ತೇನೆ.

ಉಡುಪಿ ಜಿಲ್ಲಾ ದಂಡಾಧಿಕಾರಿ ಹಾಗೂ
ಜಿಲ್ಲಾಧಿಕಾರಿ, ಉಡುಪಿಜಿಲ್ಲೆ, ಉಡುಪಿ.

ಪಿ.ಆರ್. 1662

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ: ಎಲ್.ಆರ್.ಎಫ್/ ಸಿಆರ್:23/2004-05, ದಿನಾಂಕ: 30ನೇ ಅಕ್ಟೋಬರ್, 2004**

**ವಿಷಯ :** ದಿ ಆರ್ಡರ್ ಆಫ್ ಸರ್ವೆಂಟ್ಸ್ ಆಫ್ ಮೇರಿ ರವರು ಬೆಂಗಳೂರು ದಕ್ಷಿಣ ತಾಲ್ಲೂಕು ತಾವರೆಕೆರೆ ಹೋಬಳಿ ಚನ್ನೇನಹಳ್ಳಿ ಗ್ರಾಮದ ಸ.ನಂ.39/3ಎ, 39/3ಬಿ ರಲ್ಲಿ ಒಟ್ಟು 3-20 ಎಕರೆ/ ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ. 109 ರಡಿ ಕ್ರಯಕ್ಕೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ದಿ ಆರ್ಡರ್ ಆಫ್ ಸರ್ವೆಂಟ್ಸ್ ಆಫ್ ಮೇರಿ ರವರು ಇವರು ಬೆಂಗಳೂರು ದಕ್ಷಿಣ ತಾಲ್ಲೂಕು ತಾವರೆಕೆರೆ ಹೋಬಳಿ, ಚನ್ನೇನಹಳ್ಳಿ ಗ್ರಾಮದ ಸರ್ವೆ.ನಂ. 39/3ಎ 39/3ಬಿ ರಲ್ಲಿ ಒಟ್ಟು 3-20 ಎಕರೆ/ ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15 ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪ ವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪ ವಿಭಾಗ ರವರ ಪತ್ರ ಸಂಖ್ಯೆ: ಎಲ್.ಆರ್.ಎಫ್ (109) ಸಿಆರ್:17/04-05 ದಿನಾಂಕ: 28.09.2004ರಲ್ಲಿ ಪ್ರಸ್ತಾಪಿತ ಗ್ರಾಮದ ಸರ್ವೆ ನಂಬರ್ 39/3ಎ, 39/3ಬಿ ರಲ್ಲಿ 3-20 ಎಕರೆ/ ಗುಂಟೆ ಜಮೀನನ್ನು ಕ್ರಯಕ್ಕೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(1) (11)ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ರಿಜಿಸ್ಟ್ರೇಷನ್ ಆಫ್ ಸೊಸೈಟೀಸ್ ಕಾಂಚೀಪುರ ತಮಿಳುನಾಡು ರಾಜ್ಯದಲ್ಲಿ ದಿನಾಂಕ: 06.02.1997ರಂದು ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಕ್ರಯಕ್ಕೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಮತ್ತು ಚಾರಿಟೇಬಲ್ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109(1)(11) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ದಕ್ಷಿಣ ತಾಲ್ಲೂಕು, ತಾವರೆಕೆರೆ ಹೋಬಳಿ ಚನ್ನೇನಹಳ್ಳಿ ಗ್ರಾಮದ ಸರ್ವೆ ನಂ. 39/3ಎ, 39/3ಬಿ ರಲ್ಲಿ 3-20 ಎಕರೆ/ ಗುಂಟೆ ಜಮೀನನ್ನು ದಿ ಆರ್ಡರ್ ಆಫ್ ಸರ್ವೆಂಟ್ಸ್ ಆಫ್ ಮೇರಿ, ಜೆಹಾನ್ ಮಾತಾ ಪ್ರೈಮರಿ, ನಂ.8, ಕೆ.ಸಾತನೂರು ರಸ್ತೆ, ಜೆಹಾನ್ ಮಾತನಗರ, ತಿರುಚಿ-620021ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109(1) (11) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂಖ್ಯೆ: ಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.04.2003ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಶೀಲ್ದಾರ್ ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2) ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3ರಲ್ಲಿ ಹೇಳಿರುವಂತೆ, ಶೇ.55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತು ಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾಯಿಸಬಾರದು.
3) ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರುವಲಯದಲ್ಲಿ ಬರುತ್ತಿದ್ದು ವಿದ್ಯಾ ಸಂಸ್ಥೆಗಳಿಗೆ ಉಪಯೋಗಿಸಿಕೊಳ್ಳಲು ಭೂ ಬದಲಾವಣೆಯ ಅವಶ್ಯಕತೆ ಇದ್ದಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.

4) ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು.

5) ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿಡಿಪಿ, ಒಡಿಪಿ ಹಾಗೂ ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.

6) ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದು ಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.

7) ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು (ಕಂ),
ಪಿ.ಆರ್. 1663 ಬೆಂಗಳೂರು ಜಿಲ್ಲೆ.

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಕೆಗಳು**

**ವಿಷಯ :** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಹಣಕಡಬುರು ಗ್ರಾಮದಲ್ಲಿ ಅಲಂಕಾರಿಕ ಶಿಲೆಗಾಗಿ ಮೆ: ಶ್ರೀನಿವಾಸ ಗ್ರಾನೈಟ್ಸ್ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 353 ರ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸುವ ಬಗ್ಗೆ.'

**ಉಲ್ಲೇಖ:** 1. ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ:ಡಿಸಿಬಿ: ಕಗಗು 353: 2003-04, 5895 ದಿನಾಂಕ: 27.10.2003.
2. ಉಪ ನಿರ್ದೇಶಕರು, ಕನಕಪುರ ರವರ ಪತ್ರ ಸಂಖ್ಯೆ: ಗಭೂಇ: ಉನಿಕ: ಡಿ.ಸಿ.ಬಿ.:ಕಗಗು 353:2004-05:6913 ದಿನಾಂಕ: 27.08.2004.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಹಣಕಡಬೂರು ಗ್ರಾಮದ ಸರ್ವೆ ನಂ.60ರಲ್ಲಿ ಮೆ: ಶ್ರೀನಿವಾಸ ಗ್ರಾನೈಟ್ಸ್ ರವರಿಗೆ 2-20 ಎಕರೆಗೆ ದಿನಾಂಕ: 21.07.2000 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರಗಳಂತೆ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2004ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.24,658/-ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1)ರಂತೆ ಸರ್ಕಾರದ ಅಧಿಸೂಚನೆIII ಸಂಖ್ಯೆ: ಸಿಐ 418 ಎಂ.ಆರ್.ಸಿ. 92 ದಿನಾಂಕ: 02.07.1994ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ಲ್ಯಾಪ್ಸ್ ಡ್ ಲೀಸ್ ಎಂದು ಪರಿಗಣಿಸಬೇಕಾಗಿರುತ್ತದೆ.

**ಆದೇಶ**

**ಸಂಖ್ಯೆ: ಗಭೂಇ: ಡಿಸಿಬಿ: ಕಗಗು:353: 2004-05, 12306, ದಿನಾಂಕ: 26ನೇ ನವೆಂಬರ್, 2004**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1)ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕಿನ ಹಣಕಡಬೂರು ಗ್ರಾಮದ ಸರ್ವೆ ನಂ. 60ರಲ್ಲಿ 2.20 ಎಕರೆಗೆ ಅಲಂಕಾರಿಕ ಶಿಲೆಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:353ನ್ನು ತಕ್ಷಣದಿಂದ ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸಲಾಗಿದೆ.

ನಿರ್ದೇಶಕರು.
ಪಿ.ಆರ್. 1665 ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ**

**ನಂ.ಇಎಕ್ಸ್ಇ:3:ಡಿಟಿಸಿಆರ್ಎಂ: 274/2001-02, ದಿನಾಂಕ: 10ನೇ ನವೆಂಬರ್, 2004**

**ಉಪಸ್ಥಿತರು:** ಶ್ರೀ ಮಹಮದ್ ಇಲಿಯಾಸ್ ಅಹಮದ್
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ.

**ಫಿರ್ಯಾದುದಾರರು:** ವಿರುದ್ಧ **ಆರೋಪಿಗಳು**

ಅಬಕಾರಿ ನಿರೀಕ್ಷಕರು, ವಿರಾಜಪೇಟೆ ವಲಯ.

ಪುಚ್ಚಿಮಾಡ ಉದಯ ತಂದೆ: ಕಾವೇರಪ್ಪ, ಬಾಳುಗೋಡು ಗ್ರಾಮ, ಬಿಟ್ಟಂಗಾಲ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 28.09.01 ರಂದು ವಿರಾಜಪೇಟೆ ವಲಯ ಅಬಕಾರಿ ನಿರೀಕ್ಷಕರು ಬಿಟ್ಟಂಗಾಲ ಗ್ರಾಮದ ಜಿಲ್‌ಸಿಫ್ ಸೋಡಾ ಅಂಗಡಿಯ ಎದುರುಗಡೆ ಸಾಯಂಕಾಲ ಸುಮಾರು 8-30 ಸಮಯಕ್ಕೆ ರಸ್ತೆಕಾವಲು ನಡೆಸುತ್ತಿದ್ದ ಸಂದರ್ಭದಲ್ಲಿ ಗೋಣಿಕೊಪ್ಪದ ಕಡೆಯಿಂದ ಜೀಪು ಸಂಖ್ಯೆ: ಕೆಎ-12-ಎಂ-3629 ಬರುತ್ತಿದ್ದುದನ್ನು ಕಂಡು, ಅದನ್ನು ತಡೆದು ನಿಲ್ಲಿಸಿ ಪರಿಶೀಲಿಸಲಾಗಿ ಜೀಪಿನ ಹಿಂದುಗಡೆ ಒಂದು ಗೋಣಿಚೀಲದಲ್ಲಿ 100x500 ಸಾರಾಯಿ ಪ್ಯಾಕೇಟುಗಳು ಪತ್ತೆ ಆಗಿದ್ದು, ಅದನ್ನು ಸದರಿ ಜೀಪಿನಲ್ಲಿ ಸಾಗಾಣಿಕೆ ಮಾಡಲು ರಹದಾರಿ ಪತ್ರ ವಗೈರೆ ಕೇಳಲಾಗಿ ವಾಹನದಲ್ಲಿದ್ದ ಪುಚ್ಚಿಮಾಡ ಉದಯ ಬಿನ್ ಕಾವೇರಪ್ಪ, ಬಾಳುಗೋಡು ಗ್ರಾಮ, ಬಿಟ್ಟಂಗಾಲ ಅಂಚೆ, ವಿರಾಜಪೇಟೆ ತಾಲ್ಲೂಕು ಇವರು ಯಾವುದೂ ಇಲ್ಲವೆಂದು ತಿಳಿಸಿರುತ್ತಾರೆ. ಭಾರೀ ಪ್ರಮಾಣದಲ್ಲಿ ಸಾರಾಯಿ ಪ್ಯಾಕೇಟುಗಳನ್ನು ಯಾವುದೇ ರಹದಾರಿ ಪತ್ರ ಇಲ್ಲದೆ ಸದರಿ ಜೀಪನ್ನು ಸಾರಾಯಿ ಪ್ಯಾಕೇಟುಗಳ ಸಮೇತ ಸ್ವಾಧೀನ ಪಡಿಸಿಕೊಂಡು ಮೇಲ್ಕಂಡ ಆಸಾಮಿ ಹಾಗೂ ವಾಹನದ ಮಾಲಿಕರ ಮೇಲೆ ವಿರಾಜಪೇಟೆ ವಲಯ ಅಬಕಾರಿ ನಿರೀಕ್ಷಕರು ಪ್ರಥಮ ವರ್ತಮಾನ ನಂ.6/2001-02, ದಿನಾಂಕ: 28.09.01 ರಂತೆ ಮೊಕದ್ದಮೆಯನ್ನು ದಾಖಲು ಮಾಡಿಕೊಂಡು ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ಈ ಪ್ರಕರಣದ ಬಗ್ಗೆ ವಾಹನದ ಮಾಲಿಕರ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಪತ್ರ ಬರೆದು ಕೋರಿಕೊಂಡ ಮೇರೆಗೆ ದಿನಾಂಕ: 22.10.01 ರಂದು 'ಬಿ' ಎಕ್ಸ್ಟ್ರಾಕ್ಟ್ ಕಳಿಸಿರುತ್ತಾರೆ. ಅದರಲ್ಲಿ ವಾಹನದ ಮಾಲಿಕರಾದ ಶ್ರೀ ಐ.ಕೆ. ತಿಮ್ಮಯ್ಯ, ತಂದೆ ಕಾವೇರಪ್ಪ, ಬಾಳುಗೋಡು ಗ್ರಾಮ

ಎಂದು ತಿಳಿದು ಬಂದಿರುತ್ತದೆ. ಈ ಮಧ್ಯೆ ದಿನಾಂಕ: 08.10.01 ರಂದು ವಾಹನದ ಮಾಲಿಕರಾದ ಶ್ರೀ ಪಿ.ಕೆ. ತಿಮ್ಮಯ್ಯ, ತಂದೆ ಕಾವೇರಪ್ಪ, ಬಾಳುಗೋಡು ಗ್ರಾಮ, ಬಿಟ್ಟಂಗಾಲ, ವಿರಾಜಪೇಟೆ ತಾಲ್ಲೂಕು ಇವರು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಅಬಕಾರಿ ಕಾಯ್ದೆ ನಿಯಮ 43(ಬಿ) ರ ಅಡಿಯಲ್ಲಿ ಅವರ ಪರ ವಕೀಲರ ಮೂಲಕ ಅರ್ಜಿಯನ್ನು ಸಲ್ಲಿಸಿ ವಶಪಡಿಸಿಕೊಂಡ ವಾಹನವನ್ನು ತಾತ್ಕಾಲಿಕವಾಗಿ ಬಿಡುಗಡೆ ಮಾಡಲು ಕೋರಿಕೊಂಡಿರುತ್ತಾರೆ.

ಈ ಪ್ರಾಧಿಕಾರವು ಮಾಲಿಕರ ಕೋರಿಕೆಯಂತೆ ದಿನಾಂಕ: 10.10.01 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ ರವರಿಗೆ ಪತ್ರ ಬರೆದು ವಾಹನದ ಮೌಲ್ಯವನ್ನು ನಿಗದಿಪಡಿಸಲು ಕೋರಿದ್ದರಿಂದ ಅದೇ ದಿನ ಪ್ರಾದೇಶಿಕ ಸಾರಿಗೆ ಅಧಿಕಾರಿಯವರು ವಾಹನವನ್ನು ಪರಿಶೀಲಿಸಿ ರೂ.40,000/- ಮೌಲ್ಯವನ್ನು ನಿಗದಿಪಡಿಸಿ ದೃಢೀಕರಣ ಪತ್ರ ನೀಡಿರುತ್ತಾರೆ.

ಅದರಂತೆ ಈ ಪ್ರಾಧಿಕಾರದಲ್ಲಿ ಚರ್ಚಿಸಿ ಸದರಿ ವಾಹನಕ್ಕೆ ರೂ. ಒಂದು ಲಕ್ಷ ಬೆಲೆಯನ್ನು ನಿಗದಿಪಡಿಸಿಕೊಂಡು ರೂ.50,000/- ಮೊತ್ತಕ್ಕೆ ಸಮನಾದ ಬ್ಯಾಂಕ್ ಗ್ಯಾರಂಟಿಯನ್ನು ಹಾಗೂ ಇನ್ನುಳಿದ ಅರ್ಧ ಮೊತ್ತಕ್ಕೆ ಸ್ಥಳೀಯ ವ್ಯಕ್ತಿಯಿಂದ ಜಮೀನಿನ ಜಮಾಬಂದಿಯನ್ನು ನೀಡುವಂತೆ ಸೂಚಿಸಿದ ಮೇರೆಗೆ ಸದರಿಯವರು ಒಪ್ಪಿಕೊಂಡು ರೂ.50,000- ಮೊತ್ತಕ್ಕೆ ವಿಜಯಾ ಬ್ಯಾಂಕ್, ಬಿಟ್ಟಂಗಾಲ ಶಾಖೆ, ವಿರಾಜಪೇಟೆ ತಾಲ್ಲೂಕು ರವರಿಂದ ಬ್ಯಾಂಕ್ ಗ್ಯಾರಂಟಿಯನ್ನು ಪಡೆದು ಹಾಗೂ ಸ್ಥಳೀಯ ವ್ಯಕ್ತಿಯಾದ ಶ್ರೀ ಪಿ.ಎಸ್. ಸನ್ನಿ, ತಂದೆ ಸೋಮಯ್ಯ, ಬಾಳುಗೋಡು ಗ್ರಾಮ ರವರು ಹೊಂದಿರುವ 3.61 ಎಕರೆ ಜಮೀನಿನ ಜಮಾಬಂದಿಯನ್ನು ಭದ್ರತೆಯಾಗಿ ನೀಡಿ ವಾಹನವನ್ನು ದಿನಾಂಕ: 24.11.01ರಂದು ಮಧ್ಯಂತರಿಕವಾಗಿ ಬಿಡುಗಡೆ ಮಾಡಿ ಆದೇಶ ನೀಡಲಾಯಿತು.

ದಿನಾಂಕ:12.10.01 ರಂದು ವಶಪಡಿಸಿಕೊಂಡ ಸದರಿ ಸಾರಾಯಿ ಪ್ಯಾಕೇಟಿನಿಂದ ಮಾದರಿ ತೆಗೆದು ರಾಸಾಯನಿಕ ತಜ್ಞರು, ಮಂಗಳೂರು ರವರಿಗೆ ಕಳಿಸಲಾಗಿದ್ದು, ಅವರ ವರದಿ ದಿನಾಂಕ: 17.11.01ರಲ್ಲಿ ಸದರಿ ಸಾರಾಯಿ ಮಾನವ ಸೇವನೆಗೆ ಯೋಗ್ಯವಿರುವುದಾಗಿ ದೃಢೀಕರಣ ಪತ್ರ ನೀಡಿರುವುದರಿಂದ ವಾಹನದ ಮಾಲೀಕರು ತಿಳಿದೇ ಈ ಕೃತ್ಯದಲ್ಲಿ ಶಾಮೀಲಾಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ.

ವಾಹನದ ಮಾಲೀಕರಾದ ಶ್ರೀ ಪಿ.ಕೆ. ತಿಮ್ಮಯ್ಯ, ತಂದೆ ಕಾವೇರಪ್ಪ, ಬಾಳುಗೋಡು ಇವರು ದಿನಾಂಕ: 25.06.04ರಂದು ಅರ್ಜಿಯನ್ನು ಸಲ್ಲಿಸಿ ನನ್ನ ಅಣ್ಣನಾದ ಉದಯನು ನನಗೆ ತಿಳಿಯದಂತೆ ಈ ಅಪರಾಧವನ್ನು ಮಾಡಿರುತ್ತಾನೆ. ಮತ್ತು ನನ್ನ ಈಗಿನ ಆರ್ಥಿಕ ಸ್ಥಿತಿ ಸರಿಯಿಲ್ಲದ ಕಾರಣ ನನಗೆ ಮೊಕದ್ದಮೆಯನ್ನು ನಡೆಸಿಕೊಂಡು ಹೋಗಲು ಕಷ್ಟವಾಗಿರುತ್ತದೆ. ಆದುದರಿಂದ ವಾಹನವನ್ನು ಕಾನೂನು ಪ್ರಕಾರ ವಿಲೇಮಾಡಲು ನನ್ನ ಅಭ್ಯಂತರವಿಲ್ಲವೆಂದು ಅರ್ಜಿ ನೀಡಿರುತ್ತಾರೆ.

ಆದುದರಿಂದ ಸದರಿ ವಾಹನವನ್ನು ಇಲಾಖೆಯ ವಶಕ್ಕೆ ಒಪ್ಪಿಸಿರುತ್ತಾರೆ. ಸದರಿ ವಾಹನವನ್ನು ತೆರೆದ ಪ್ರದೇಶದಲ್ಲಿ ನಿಲ್ಲಿಸಿದ್ದು, ಬಿಸಿಲು, ಮಳೆ, ಗಾಳಿಗೆ ಅದರ ಬಿಡಿಭಾಗಗಳೂ ತೀರಾ ಹಾಳಾಗಿರುವುದರಿಂದ ಸರ್ಕಾರಕ್ಕೆ ಬರುವ ಅಲ್ಪ ಆದಾಯವು ಕೈತಪ್ಪುವ ಸಾಧ್ಯತೆಗಳಿರುತ್ತದೆ. ಆದ್ದರಿಂದ ವಾಹನದ ಮಾಲೀಕರು ಮೊಕದ್ದಮೆಯನ್ನು ನಡೆಸಲು ಸಾಧ್ಯವಿಲ್ಲವೆಂದು ಕೈಬಿಟ್ಟಿರುವುದರಿಂದ ಮತ್ತು ಸದರಿ ದ್ರವವು ಸಾರಾಯಿ ಎಂದು ಸಾಬೀತಾಗಿರುವುದರಿಂದ ಸದರಿ ವಾಹನವನ್ನು ಅಬಕಾರಿ ಕಾಯ್ದೆಗೆ ವಿರೋಧವಾಗಿರುವ ಕೃತ್ಯಕ್ಕೆ ಬಳಸಿರುವುದು ಈ ಪ್ರಾಧಿಕಾರದಲ್ಲಿ ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಜೀಪು ಸಂಖ್ಯೆ: ಕೆಎ-12-ಎಂ-3629ರ ಮಾಲಿಕರು ಸದರಿ ಪ್ರಕರಣವನ್ನು ಈ ಪ್ರಾಧಿಕಾರದ ಮುಂದೆ ನಡೆಸಲು ಶಕ್ತನಲ್ಲದ ಕಾರಣ ಸದರಿ ವಾಹನದ ಬಗ್ಗೆ ಈ ಪ್ರಾಧಿಕಾರದಿಂದ ಕಾನೂನು ಪ್ರಕಾರ ಕೈಗೊಳ್ಳುವ ಕ್ರಮಕ್ಕೆ ತನ್ನದೇನೂ ಅಭ್ಯಂತರವಿಲ್ಲವೆಂದು ಲಿಖಿತ ಮೂಲಕ ವಿನಂತಿಸಿಕೊಂಡಿರುವುದರಿಂದ ಹಾಗೂ ವಾಹನದ ಬಗ್ಗೆ ಮುಂದೆ ಯಾರೂ ಹಕ್ಕು ಚಲಾಯಿಸದೆ ಇರುವ ಕಾರಣ ಮತ್ತು ಸದರಿ ವಾಹನದಲ್ಲಿ ಅಕ್ರಮ ಸಾರಾಯಿ ಪ್ಯಾಕೇಟುಗಳನ್ನು ಅಧಿಕೃತವಾಗಿಯೇ ಸಾಗಾಣಿಕೆ ಮಾಡಲಾಗುತ್ತಿತ್ತು ಎಂಬುವುದು ಸಾಬೀತು ಆಗಿರುವುದರಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಈ ಪ್ರಾಧಿಕಾರ ಅಭಿಪ್ರಾಯ ಪಟ್ಟಿದೆ, ಹಾಗೂ ವಾಹನವನ್ನು ತೆರೆದ ಪ್ರದೇಶದಲ್ಲಿ ನಿಲ್ಲಿಸಿದ್ದು, ಗಾಳಿ, ಮಳೆ, ಪ್ರಕೃತಿಯ ವಿಕೋಪಕ್ಕೆ ವಾಹನದ ಬಿಡಿಭಾಗಗಳು ತೀರಾ ತುಕ್ಕುಹಿಡಿದು ಹಾಳಾಗುವ ಸನ್ನಿವೇಶವಿದ್ದು, ಇದರಿಂದ ಸರ್ಕಾರಕ್ಕೆ ಬರುವಂತಹ ಆದಾಯವು ಕೈತಪ್ಪುವ ಸಾಧ್ಯತೆ ಇರುವುದರಿಂದ ವಾಹನವನ್ನು ಕೂಡಲೇ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡುವುದು ಸೂಕ್ತವಾಗಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶ.

**ಆದೇಶ ಸಂಖ್ಯೆ: ಇಎಕ್ಸ್ಇ: 3: ಡಿಟಿಸಿಆರ್ಎಂ:274:2001-02, ದಿನಾಂಕ: 10ನೇ ನವೆಂಬರ್, 2004**

ಈ ಪ್ರಕರಣದ ಮುಖ್ಯಾಂಶದಲ್ಲಿ ವಿವರಿಸಲಾದ ಸನ್ನಿವೇಶದಂತೆ ಶ್ರೀ ಮಹಮದ್ ಇಲಿಯಾಸ್ ಅಹಮದ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಪ್ರಕಾರ ನನಗೆ ಸರ್ಕಾರದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ವಿರಾಜಪೇಟೆ ವಲಯ ಅಬಕಾರಿ ನಿರೀಕ್ಷಕರ ಮೊ.ಸ. 6/2001-02, ದಿನಾಂಕ: 28.09.02ರಲ್ಲಿ ಸ್ವಾಧೀನ ಪಡಿಸಿಕೊಂಡ ಜೀಪು ಸಂಖ್ಯೆ: ಕೆಎ-12-ಎಂ-3629 ರನ್ನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43(ಎ)(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ. ಈ ಆದೇಶವನ್ನು ಇಂದು ಅಂದರೆ ದಿನಾಂಕ: 19.07.04ರಂದು ಉಖ್ತಲೇಖನ ಕೊಟ್ಟು ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್. 1667

**FORM NO.155**
**[See rule 329]**
**(MEMBER'S VOLUNTARY WINDING UP)**
**KOPS FINANCE PRIVATE LIMITED**
**Notice convening final meeting of contributories**

Notice is hereby given in pursuance of Section 497 of Companies Act, 1956, that General Meeting of the members of the above named Company will be held at the office of liquidator at CTS 9301, Sector XI, Adjacent Lane to National Highway, Mahantesh Nagar, Belgaum-590016 on 10th January, 2005 at 11A.M. for the purpose of having an account laid before them showing the manner in which the winding up has been conducted and the property of the company disposed of and of hearing and explanation that may be given by the liquidator and also of determining by a special resolution of the company, the manner in which the books, accounts and documents of the company and of the liquidator shall be disposed of.

Place: Belguam
Dated: 08.11.2004
PD-81

**MAHANTESH UJJANKOP**
LIQUIDATOR.